

ಸೆಪ್ಟೆಂಬರ್, ೧೯೮೭

# ಸಿದ್ಧಗಂಗಾ

# ಸಿದ್ಧಗಂಗಾ

ಸಂಪುಟ–೧೧ ಸಂಚಿಕೆ–೯ ಸೆಪ್ಟೆಂಬರ್ ೧೯೮೬

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಜಾಜಿಮಲ್ಲಿಗೆ ಕಂಪು ಮರುಗ ಬಿಲ್ವ ಸೊಂಪು
ಸಾಜ ಜಂಗಮವೆ ನೀ ತಂಪು। ನನ್ನ ತಂದೆ
ಸಿದ್ಧಗಂಗಾ ಗುರುವೇ ಕೃಪೆಯಾಗು ॥

* * *

ಮುಂಜಾವದ ಹೊಂಬೆಳಗು ನಿನ್ನ ದರ್ಶನ ತಂದೆ
ಸಂಜೆಯ ಕೊಂಬೆಳಗು ನಿನ್ನ ಮಾತು। ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ನುಡಿ ಲಿಂಗ ಶ್ರೀ ಗುರುವೆ ನಡೆಲಿಂಗಜಂಗಮವೆ
ಜಪದೊಳಗೆ ಅರಳಿರುವ ಮಂಗಳವೆ॥ ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

—ಹೆಚ್.ವಿ. ವೀರಭದ್ರಯ್ಯ.

# ಸಿದ್ಧಗಂಗಾಂತರಂಗ





## ಶ್ರೀವಾಣಿ



ಮಾನವನು ಜನ್ಮ ಸಾರ್ಥಕಗೊಳಿಸಿಕೊಳ್ಳಲು ನಾಲ್ಕುವಿಧ ಪುರುಷಾರ್ಥಗಳನ್ನು ಆಚರಿಸಬೇಕೆಂದು ಶಾಸ್ತ್ರಕಾರರು ಹೇಳಿದ್ದಾರೆ. ಧರ್ಮ ಅರ್ಥ, ಕಾಮ, ಮತ್ತು ಮೋಕ್ಷಗಳೇ ಆ ಪುರುಷಾರ್ಥ. ಮೊದಲು ಹೇಳಿರುವ ಮುಖ್ಯ ಉದ್ದಿಶ್ಯವೆಂದರೆ, ಧರ್ಮವನ್ನು ಮೊದಲು ತಿಳಿದು, ಧರ್ಮದಿಂದ ಅರ್ಥಾತ್ ಧರ್ಮವಿರುದ್ಧವಲ್ಲದ ಅರ್ಥ ಕಾಮಗಳನ್ನು ಸಂಪಾದನೆ ಮಾಡಬೇಕು ಮತ್ತು ಬಳಸಬೇಕು ಆಗಲೇ ಮುಂದಿನ, ಅಂದರೆ ಕೊನೆಯ ಪುರುಷಾರ್ಥವಾದ ಮೋಕ್ಷವು ಸಿದ್ಧಿಸುವುದು. ಇದೇ ಮಾನವನ ಪರಮಪುರುಷಾರ್ಥ. ಆ ಮೋಕ್ಷವನ್ನು ಹೊಂದುವುದೇ ಅವನ ಕೊನೆಯ ಗುರಿ. ಹಾಗಾದರೆ ಮೋಕ್ಷ ಸಂಪಾದನೆಗೆ ಮೂಲಃ ಧರ್ಮಿಷ್ಠನಾಗಬೇಕು. ಧರ್ಮವೆಂದರೆ "ಇಷ್ಟಪ್ರಾಪ್ತಿಃ ಅನಿಷ್ಟನಿವೃತ್ತಿಃ ಧರ್ಮಃ" ಎಂದರೆ ಅನಿಷ್ಟವನ್ನು ನೀಗಿ ಇಚ್ಛಿತವಾದದ್ದನ್ನು ಪಡೆಯುವುದೇ ಧರ್ಮವೆಂದು ಒಂದು ವಿಧದಲ್ಲಿ ಹೇಳುತ್ತಾರೆ. "ಯತೋಽಭ್ಯುದಯ ನಿಃಶ್ರೇಯಸ ಸಿದ್ಧಿಃ ಸಧರ್ಮಃ" ಇಹಲೋಕದ ಅಭ್ಯುದಯವನ್ನು ಪರಲೋಕದ ಉನ್ನತಿಯಾದ ಮುಕ್ತಿಯನ್ನು ಕೊಡತಕ್ಕಂತಹದು ಧರ್ಮಃ ವೆಂದು ಮತ್ತೊಬ್ಬ ಶಾಸ್ತ್ರಿಕರು ಹೇಳುತ್ತಾರೆ.

ಧೃತಿಃ ಕ್ಷಮಾ ದಮೋಽಸ್ತೇಯಂ ಶೌಚಮಿಂದ್ರಿಯ ನಿಗ್ರಹಃ ।
ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮ ಲಕ್ಷಣಂ ॥

ಅಂದರೆ ಧೈರ್ಯ, ಕ್ಷಮೆ, ಮನೋನಿಗ್ರಹ, ಕದಿಯದಿರುವಿಕೆ, ಶೌಚ ಇಂದ್ರಿಯ ನಿಗ್ರಹ, ಬುದ್ಧಿ, ವಿದ್ಯೆ, ಸತ್ಯ ಮತ್ತು ಕೋಪಮಾಡದಿರುವುದು–ಇವು ಹತ್ತೂ ಧರ್ಮವೆಂದು ಮನುಮಹರ್ಷಿಗಳು ಹೇಳಿದ್ದಾರೆ. ಹೀಗೆ ಧರ್ಮಕ್ಕೆ ನಾನಾ ಶಾಸ್ತ್ರ ಕರೆದು ವ್ಯಾಖ್ಯೆಯನ್ನು ಕೊಟ್ಟಿದ್ದಾರೆ. ಒಟ್ಟಿನಲ್ಲಿ ಹೇಳುವುದಾದರೆ ಈ ಶ್ರೇಷ್ಠವಾದ ಮಾನವ ಜನ್ಮವನ್ನು ಸಾರ್ಥಕ ಗೊಳಿಸಲು ಸಾಧಕವಾದದು ಧರ್ಮ. ಈ ಬಗೆಯ ಧರ್ಮದ ಆಚರಣೆಯನ್ನು ದಿನ ನಿತ್ಯದ ಜೀವನ ಕ್ರಮವಾಗಬೇಕು ಹೀಗೆ ಧರ್ಮ ಪೂರ್ವಕವಾಗಿ ಗಳಿಸಬೇಕು ಹಣವನ್ನು. ಧರ್ಮಕ್ಕೆ ವಿರುದ್ಧವಾದಗಳಿಕೆ ಅನರ್ಥವಾಗುತ್ತದೆ. ನಿಷ್ಕಲ್ಮಷವಾದ ಕಾಮನೆಯೇ ಕಾಮವು. ಈ ರೀತಿ ಧರ್ಮ, ಅರ್ಥ, ಕಾಮಗಳು ನಮಗೆ ಮುಂದೆ ಸಿಗಬಹುದಾದ ಮೋಕ್ಷಕ್ಕೆ ಸಹಾಯವಾಗಬೇಕು. ಇವು ಮೂರು ಮೋಕ್ಷಕ್ಕೆ ಸಾಧಕವಾಗದೆ ಇರುವ ಪಕ್ಷದಲ್ಲಿ ಅವನ್ನು ನಿಜವಾದ ಪುರುಷಾರ್ಥಗಳೆಂದು ಕರೆಯಲು ಸಾಧ್ಯವಿಲ್ಲ. ಜನ್ಮ ಸಾರ್ಥಕವೂ ಅಲ್ಲ. ಹುಟ್ಟೇ ನಿರರ್ಥಕ.

"ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು

ಪಂ॥ ಚನ್ನಪ್ಪ ಎರೇಸೀಮೆ

ಸಂಪಾದಕರು

ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು

ಟಿ. ಎಸ್. ಚಂದ್ರಶೇಖರಯ್ಯ

ಬಸವರಾಜು

* * *

ಜಾಹೀರಾತು ವಿಭಾಗ

ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ

ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು

ಹೆಚ್. ಜಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ

ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ವಾರ್ಷಿಕ ಚಂದಾ 20-00 ರೂ

ಅಜೀವ ಸದಸ್ಯತ್ವ 201-00 ರೂ

### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.



# ಸಂಪಾದಕೀಯ

## ನಮಗಿಂದು ಹೃದಯಬೇಕಾಗಿದೆ

ಸೇವೆ, ದುಡಿಮೆ, ಅರ್ಪಣೆ ಈ ಮುಂತಾದ ಮಾತುಗಳಿಗೆಲ್ಲ ಇಂದು ಅರ್ಥವೇ ಇಲ್ಲವಾಗುತ್ತಿದೆ. ಮಾನವೀಯ ಭಾವನೆಗಳೂ ಬತ್ತಿ ಬರಡಾಗುತ್ತಿವೆ, ಸದ್ದು ಗದ್ದಲ, ಅಬ್ಬರ ಆರ್ಭಟಗಳಿಗೆ ಮೊದಲ ಮನ್ನಣೆ ಲಭಿಸುತ್ತಿದೆ. ಚಿಂತನಶೀಲ ಪ್ರವೃತ್ತಿ ಶೂನ್ಯವಾಗುತ್ತಿದೆ. ವೈಚಾರಿಕ ಪ್ರಜ್ಞೆ ಕತ್ತಲಾಳಕ್ಕೆ ಸರಿಯುತ್ತಿದೆ ಇಂದಿನ ನಮ್ಮ ಬದುಕಿನ ಸೌಂದರ್ಯಕ್ಕೆ, ನೆಮ್ಮದಿಗೆ, ನಿಷ್ಕಾಮ ಸೇವೆ ಸಲ್ಲಿಸಿದ ಚೇತನಗಳನ್ನು ಮರೆಯುತ್ತಿದ್ದೇವೆ. ಈ ನಮ್ಮ ಬದುಕೆಂಬುದು ಕೇವಲ ನಮ್ಮಿಂದಲೇ ರೂಪಿತವಾದುದಲ್ಲ ಅನೇಕ ವ್ಯಕ್ತಿಗಳಿಗೆ, ಕೃಪಾ ಶಕ್ತಿಗಳಿಗೆ, ಸಂಘ, ಸಂಸ್ಥೆಗಳಿಗೆ ಋಣಿಯಾದದ್ದು.

ಸಿದ್ಧಗಂಗಾ ಮಠದ ಸೇವೆಯ ಫಲಾನುಭವಿಗಳು ಅಸಂಖ್ಯ. ಸೇವಾ ಸಾಣೆಯಲ್ಲಿ ಶ್ರೀಗಂಧವಾಗಿ ಸವೆದವರು ಪರಮ ಪೂಜ್ಯ ಶ್ರೀ ಶ್ರೀಗಳು. ಸುಮಾರು ಆರು ದಶಕಗಳ ನಿರಂತರ ಕಾಯಕದ ಫಲ 'ಸಿದ್ಧಗಂಗಾ ಮಠ'. 'ಸಿದ್ಧಗಂಗಾ' ಎಂಬುದು ಇಂದು ನಿನ್ನೆಯದಲ್ಲ, ಅದಕ್ಕೆ ಇತಿಹಾಸವಿದೆ, ದೀರ್ಘ ಪರಂಪರೆಯಿದೆ. ಪಾವಿತ್ರ್ಯಪೂರ್ಣ ಬೆಳವಣಿಗೆಯಿದೆ, ಅಲ್ಲದೆ ಔದಾರ್ಯದ ಮಹಾ ಗಣಿಯಾಗಿ ಎದ್ದುನಿಂತ ದೇವಶಿಲ್ಪಿ ಸ್ವಾಮಿಗಳ ಸೇವೆಗೆ ಅನಂತ ಮುಖಗಳು. ತಮ್ಮ ವಿಚಾರಪೂರ್ಣ ಆಚರಣೆಯ ಮೂಲಕ ಸಹಸ್ರಾರು, ಲಕ್ಷ ಲಕ್ಷ ಸುಸಂಸ್ಕೃತ ಹೃದಯವಂತ ಜೀವಿಗಳನ್ನು ರೂಪಿಸಿದ್ದಾರೆ ಕಲ್ಲು ಹೊತ್ತು, ನಾಟಿ ಹಾಕಿ, ನೀರು ಸೇದಿ, ಹಿಟ್ಟು ತಿರುವಿ, ಮೈಲಿ ಮೈಲಿಗಳುದ್ದವನ್ನು ನಡೆದು ಸಂಚರಿಸಿ 'ರಾಗಿ ಭಿಕ್ಷ' ಮಾಡಿ, ಅಂಗುಲಂಗುಲವಾಗಿ, ಹಂತಹಂತವಾಗಿ ಸಂಸ್ಥೆಯನ್ನು ಕಟ್ಟಿದ್ದಾರೆ. ಇಂದು ನಮ್ಮ ಕಣ್ಣಿಗೆ ಕಾಣುವ ಈ ಸೇವಾ ಮಹಾವೃಕ್ಷದ ಬೆಳವಣಿಗೆಯ ಹಿಂದೆ ಶ್ರೀ ಶ್ರೀಗಳವರ ಅಪಾರ ಶ್ರಮದ ದುಡಿತವಿದೆ. ಸ್ವಾಮಿಗಳೆಂದೂ ಸಂಸ್ಥೆಯನ್ನು ಪೂರ್ವಾಶ್ರಮದ ಬಂಧುಗಳಿಗೆ, ಒಂದು ಜಾತಿಗೆ, ಒಂದು ಕೋಮಿಗೆ, ಒಂದು ರಾಜ್ಯದವರಿಗೆಂದು ಸೀಮಿತಗೊಳಿಸಲಿಲ್ಲ. ಅಥವಾ ಕೇವಲ ಸಂಸ್ಕೃತಾಭ್ಯಾಸಕ್ಕೆ ಮೊಟಕುಗೊಳಿಸಲಿಲ್ಲ. ಆಧುನಿಕ ಅವಶ್ಯಕತೆಗಳನ್ನರಿತು ಅವುಗಳ ಅಭ್ಯಾಸಕ್ಕೆ ಅನುಕೂಲ ಕಲ್ಪಿಸುತ್ತ ಬಂದಿದ್ದಾರೆ. ಶಿಕ್ಷಣ, ಜ್ಞಾನ ವಿಜ್ಞಾನ ತಂತ್ರ ಜ್ಞಾನ, ವೈದ್ಯಕೀಯ ವಿಜ್ಞಾನ, ಕೈಗಾರಿಕೋದ್ಯಮ,

ಪತ್ರಿಕೋದ್ಯಮ, ಧರ್ಮ ಪ್ರಸಾರಗಳಿಗೆಲ್ಲ ಮಾರ್ಗ ತೋರಿದ್ದಾರೆ. ತಮ್ಮ ಗುರು ಪೂಜ್ಯ ಶಿವಯೋಗಿ ಉದ್ದಾನ ಸ್ವಾಮಿಗಳವರ ಕಾರುಣ್ಯದ ಶಿವಬೆಳಕು ಸಂಸ್ಥೆಯ ಅಭಿವೃದ್ಧಿ ಎಂದೇ ನಂಬಿ ನಡೆದಿರುವ ಸ್ವಾಮಿಗಳು, ತಮ್ಮ ಸೇವಾ ಜೀವನದ ಉದ್ದಕ್ಕೂ ಸಹಾಯ, ಸಹಕಾರ ನೀಡುತ್ತ ಬಂದಿರುವ ಒಬ್ಬೊಬ್ಬರನ್ನೂ ತುಂಬು ಹೃದಯದಿಂದ ಸ್ಮರಿಸುತ್ತಾರೆ. ಶ್ರೀಮಠದ ಸೇವಾನುಭವಿಗಳಿದ್ದಾರೆ ಇಂದು ದೇಶೋವಿಶಾಲದಲ್ಲಿ, ಹಲವು ಹನ್ನೊಂದು ಗೌರವಾನ್ವಿತ ಸ್ಥಾನಗಳಲ್ಲಿ. "ಶ್ರೀ ಶ್ರೀಗಳವರು ಹೇಳುವಂತೆ ಸಿದ್ಧಗಂಗಾ ಮಠವೆಂದರೆ ಇಲ್ಲಿನ ಕಟ್ಟಡಗಳಲ್ಲ, ಆಸ್ತಿ ಪಾಸ್ತಿಯಲ್ಲ ಇಲ್ಲಿ ರೂಪಿತರಾದ ಸುಸಂಸ್ಕೃತ ವಿದ್ಯಾರ್ಥಿಗಳು. ಈ ಸಂಸ್ಥೆಯೊಂದಿಗೆ ಪ್ರೀತಿ ವಿಶ್ವಾಸಗಳನ್ನು ಉಳಿಸಿ, ಬೆಳೆಸಿಕೊಂಡು ಬಂದಿರುವ ಅಸಂಖ್ಯ ಅಭಿಮಾನಿ ಭಕ್ತಕೋಟಿ"

ನಾವಿಂದು ಚಿಂತಿಸಬೇಕಾಗಿದೆ ತಮ್ಮ ನಿಡು ಬಾಳನ್ನು ನಿಷ್ಕಾಮ ಭಾವನೆಯಿಂದ ಸಮಾಜಕ್ಕೆ ಅರ್ಪಿಸಿದ ಮಹಾ ಚೇತನಕ್ಕೆ ಪ್ರತಿಯಾಗಿ ನಾವು ಕೊಡಬೇಕಾದುದೇನು?

---

ಅತ್ತೆ ಮಾಯೆ, ಮಾವ ಸಂಸಾರಿ, ಮುವ್ವರು ಮೈದುನರು ಹುಲಿಯಂತವರು, ನಲ್ಲನು ನಗೆವೆಣ್ಣು ಕೆಳದಿಯರ ಭಾವದಲಿರುವನು. ಇವದೇವನಲ್ಲ. ಅತ್ತಿಗೆಯರ ಮೀರಲಾರೆನು. ತೊತ್ತುವಿನ ಕಾವಲು. ಹೇಳುವರೆ ಕೇಳು, ಕರ್ಮವೆಂಬ ಗಂಡನ ಬಾಯ ಟೊಣೆದು, ಹಾದರವನಾಡುವೆನು ಹರನ ಕೂಡೆ. ಮನವೆಂಬ ಸಖಿಯ ಪ್ರಸಾದದಿಂದ ಅಶುಭಾವವ ಕಲಿತೆನು ಶಿವನೊಡನೆ. ಕರಚೆಲ್ವ ಶ್ರೀಶೈಲ ಚನ್ನಮಲ್ಲಿಕಾರ್ಜುನನ ಸಜ್ಜನ ಗಂಡನ ಮಾಡಿಕೊಂಬೆ.

÷ ÷ ÷ ÷ ÷

ಒಳಗೆ ಶೋಧಿಸಿ ಹೊರಗೆ ಶುದ್ಧನರಿಸಿ, ಒಳಹೊರಗೆಂಬ ಉಭಯ ಶಂಕೆಯ ಕಳೆದು, ಸ್ಪಟಿಕದ ಶಲಾಕೆಯಂತೆ ತಳವೆಳಗು ಮಾಡಿ, ಸುಕ್ಷೇತ್ರವನರಿದು ಬೀಜವ ಬಿತ್ತುವಂತೆ ಶಿಷ್ಯನ ಸರ್ವ ಪ್ರಪಂಚ ನಿವೃತ್ತಿಯಂ ಮಾಡಿ, ನಿಜೋಪದೇಶವನಿತ್ತು, ಆ ಶಿಷ್ಯನ ನಿಜದಾದಿಯ ನೈದಿಸುವನೀಗ ಜ್ಞಾನ ಗುರು. ಆ ಸಹಜ ಗುರುವೀಗ ಜಗದಾರಾಧ್ಯರು. ಅವರ ಶ್ರೀಪಾದಕ್ಕೆ ನಮೋ ನಮೋ ಎಂಬೆ ಕಾಣಾ ಚನ್ನಮಲ್ಲಿಕಾರ್ಜುನಾ.

—ಅಕ್ಕಮಹಾದೇವಿ



# ಮಾಣಿಕ್ಯ ದೀಪ್ತಿ

—ವಿದ್ವಾನ್ .ಎಸ್.ಷಡಕ್ಷರಿ B Sc, M A. Bed,.
ಉಪ ಪ್ರಾಧ್ಯಾಪಕರು, ಸಂಸ್ಕೃತ ಕಾಲೇಜು, ಸಿದ್ಧಗಂಗಾ.

## ಸಜ್ಜನ ಸಹವಾಸ

ಮನುಷ್ಯ ಪರಿಸರದ ಕೂಸು ಒಳ್ಳೆಯದೋ, ಕೆಟ್ಟದೋ, ಸಹವಾಸದ ಅವಸ್ಥೆಗಳನ್ನು ಮೈಗೂಡಿಸಿಕೊಳ್ಳುವ ಪ್ರವೃತ್ತಿಯಲ್ಲಿ ತೊಡಗುತ್ತಾನೆ. ಕೆಲವೊಮ್ಮೆ ಅಡ್ಡಗೋಡೆಯ ಮೇಲೆ ದೀಪವಿಟ್ಟಂತೆ ಅಡ್ಡದಾರಿ ಹಿಡಿದು ಜೀವನದ ಗುರಿಯನ್ನು ಮರೆಯುತ್ತಾನೆ ಈ ಅಡ್ಡದಾರಿ ಬಿಟ್ಟು ದೊಡ್ಡಗುರಿ ಸಾಧಿಸಬೇಕಾದರೆ ಮಾರ್ಗ ಯಾವುದು? ಎಂದ. ಚಿಂತನೆ ಮಾಡಿದಾಗ ಅನುಭವಿಗಳು ಹೇಳಿದ ಮಾತು ಜ್ಞಾಪಕಕ್ಕೆ ಬರುತ್ತದೆ ಅಂದರೆ ಒಳ್ಳೆಯ ಸಹವಾಸ.

ಒಳ್ಳೆಯವರ ಸಹವಾಸವೆಂದರೆ ಸಜ್ಜನರ ಸಹವಾಸವೆಂತಲೂ ಇಟ್ಟುಕೊಳ್ಳಬಹುದು. ಪರಮಾತ್ಮನು ತನ್ನ ಅಪೂರ್ವ ಸೃಷ್ಟಿಯಲ್ಲಿ ಮಾನವನಿಗೆ ಅನೇಕ ಸ್ಥಾನಗಳನ್ನು ಸನ್ನಿಹಿತಗೊಳಿಸಿದ್ದಾನೆ ಅಂತಹ ಸ್ಥಾನಗಳಲ್ಲಿ ಸತ್ಸಹವಾಸವು ಒಂದು ಎಂಬುದನ್ನು ಮರೆಯಬಾರದು. ಈ ಸತ್ಸಹವಾಸದಿಂದ ನೀಚ ಕೂಡ ಉನ್ನತ ಮಟ್ಟವನ್ನು ಮುಟ್ಟುತ್ತಾನೆ. ಕಲುಷಿತವಾದುದು, ಗುಣಭೂಷಿತವಾಗುತ್ತದೆ. ಮೂರ್ಖನು ಕೂಡ ಪ್ರವೀಣನಾಗುತ್ತಾನೆ. ಒಂದು ಕೀಟವೂ ಕೂಡ ಹೂವಿನ ಸಹವಾಸದಿಂದ ದೇವತೆಗಳ ತಲೆಗೆ ಏರುವುದಿಲ್ಲವೆ? ಮಾನವನ ಆಧ್ಯಾತ್ಮಿಕ ಮತ್ತು ಲೌಕಿಕ ಜೀವನವು ಸತ್ಸಂಗದಿಂದಲೇ ಸಂಭವಿಸುವುದು. ಏಕೆಂದರೆ ಮನುಷ್ಯನು ಪರಿಸ್ಥಿತಿಯ ದಾಸನು, ಮತ್ತು ಸಮಾಜ ಜೀವಿಯೂ ಆದ್ದರಿಂದ ಅವನ ಮೇಲೆ ವಾತಾವರಣದ ಪ್ರಭಾವ ಸ್ವಾಭಾವಿಕವಾಗಿ ಉಂಟಾಗುತ್ತದೆ.

ಸಜ್ಜನ ಸಹವಾಸವನ್ನು ಎರಡು ವಿಧವಾಗಿ ಪಡೆಯಬಹುದು ಒಂದು ಶ್ರೇಷ್ಠ ಪುರುಷರಿಂದ ಕೂಡಿದ್ದು ಮತ್ತೊಂದು ಶ್ರೇಷ್ಠ ಪುಸ್ತಕಗಳಿಂದ ಪಡೆಯಬಹುದು. ಸಜ್ಜನರ ಸಹವಾಸವೆಂದರೆ ಹೆಜ್ಜೇನು ಸವಿದಂತೆ. ದುರ್ಗಂಧವಿರುವಕಡೆ ಅಪೂರ್ವ ಸುಗಂಧದ ಆನಂದ ಪ್ರಾಪ್ತವಾದಂತೆ ಶ್ರೇಷ್ಠ ಪುಸ್ತಕಗಳನ್ನು ಅಧ್ಯಯನ ಮಾಡುವುದರಿಂದಲೂ ಸಜ್ಜನರ ಸಹವಾಸದಿಂದುಂಟಾಗುವ ಎಲ್ಲ ಗುಣಗಳು ಪ್ರಾಪ್ತವಾಗುತ್ತವೆ.

ಜಾಡ್ಯಂ ಧಿಯೋಹರತಿ, ಸಿಂಚತಿವಾಚಿ ಸತ್ಯಂ ।
ಮನೋನ್ನತಿಂ ದಿಶತಿ, ಪಾಪಮಪಾಕರೋತಿ ॥
ಚೇತಃ ಪ್ರಸಾದಯತಿ, ದಿಕ್ಷು ತನೋತಿ ಕೀರ್ತಿಂ
ಸತ್ಸಂಗತಿಃಕಥಯ ಕಿಂನಕರೋತಿ ಪುಂಸಮ್ ॥

ಸತ್ಸಂಗತಿಯು ಬುದ್ಧಿಯ ಜಡತ್ವವನ್ನು ಹೋಗಲಾಡಿಸುತ್ತದೆ ಮಾತಿನಲ್ಲಿ ಸತ್ಯವನ್ನು ಚಿಮುಕಿಸುತ್ತದೆ ಗೌರವವನ್ನು ಹೆಚ್ಚಿಸುತ್ತದೆ ಪಾಪವನ್ನು ದೂರ ಮಾಡುತ್ತದೆ ಮನಸ್ಸನ್ನು ಪ್ರಸನ್ನಗೊಳಿಸುತ್ತದೆ. ಎಲ್ಲ ದಿಕ್ಕುಗಳಲ್ಲಿಯೂ ಕೀರ್ತಿಯನ್ನು ಹರಡುತ್ತದೆ ಸಜ್ಜನ ಸಹವಾಸಕ್ಕೆ ಸಮಾನವಾದುದು ಈ ಪ್ರಪಂಚದಲ್ಲಿ ಯಾವ ವಸ್ತುವೂ ಇರಲಾರದು ಎಂದು ಹೇಳಿದರೆ ತಪ್ಪಾಗಲಾರದು ಸತ್ಸಂಗವಿಲ್ಲದೆ ಆತ್ಮೋನ್ನತಿ ಅಸಂಭವ ವ್ಯಕ್ತಿಯು ಹೇಗೇ ಇರಲಿ, ಏನೇ ಆಗಿರಲಿ ಸಜ್ಜನರ ಸಹವಾಸದಿಂದ ಲೌಕಿಕ ಮತ್ತು ಪರಲೌಕಿಕ ಸುಖ ಪ್ರಾಪ್ತವಾಗುತ್ತದೆ. ಜ್ಞಾನವೃಷ್ಟಿಗೋಸ್ಕರ ಸಜ್ಜನರ ಸಂಗ ಕಲ್ಪವೃಕ್ಷಕ್ಕೆ ಸಮಾನವಾದುದು ನಿರಾಶನಾದ ಅರ್ಜುನನಿಗೆ ಯುದ್ಧದಲ್ಲಿ ತನ್ನ ಸಂಬಂಧಿಗಳನ್ನು ಕಂಡು ಏನು ಮಾಡಬೇಕೆಂದು ತೋಚದವನಾದಾಗ ಒಂದು ವೇಳೆ ಶ್ರೀ ಕೃಷ್ಣನ ಸಹವಾಸವಿಲ್ಲವಾಗಿದ್ದರೆ ಧರ್ಮ ಸಂಸ್ಥಾಪನೆ ಸಾಧ್ಯವಾಗುತಿತ್ತೆ? ಜಾಂಬುವಂತ ಮತ್ತು ಹನುಮಂತ ರಾಮನ ಸತ್ಸಂಗದಿಂದ ಶ್ರೇಷ್ಠ ವರ್ಗದಲ್ಲಿ ಸೇರಿಸಲ್ಪಟ್ಟಿಲ್ಲವೆ ಆಧುನಿಕ ಯುಗದಲ್ಲಿ ಮಹಾತ್ಮ ಗಾಂಧಿಯವರ ಸಹವಾಸದಿಂದ ಜವಹರಲಾಲ್ ನೆಹರು, ಸುಭಾಷ್ ಚಂದ್ರಭೋಸರು ಮಹಾವ್ಯಕ್ತಿಗಳಾದರು ಸಹವಾಸದೋಷದಿಂದ ಮಾನವ ಒಳ್ಳೆಯವನು ಮತ್ತು ಕೆಟ್ಟವನು ಆಗುತ್ತಾನೆ ಸೂರ್‌ದಾಸ್ ಕವಿಯು ತನ್ನ ಮಾತಿನಲ್ಲಿ ಹೀಗೆ ಹೇಳುತ್ತಾನೆ. ಸೀಪ್ ಗಯಾ ಮೋತೀಭಯಿ, ಕದಲಿ ಭಯಾ ಕಪೂರ್। ಅಹಿಮುಖ ಗಯಾತೋ ವಿಷಭಯಾ, ಸಂಗತಕೆ ಫಲ ಸೂರ್ ॥ ಪುರುಷ ಮಣಿಯ ಸ್ಪರ್ಶದಿಂದ ಕಬ್ಬಿಣವು ಚಿನ್ನವಾಗುವಂತೆ ಲೋಹರೂಪಿಯಾದ ಮೂರ್ಖ ಮನುಷ್ಯ ಪುರುಷಮಣಿರೂಪಿಯಾದ ಸತ್ಸಂಗದಿಂದ ಬಂಗಾರ ರೂಪ ಮನುಷ್ಯನಾಗಿ ಹೊಳೆಯುತ್ತಾನೆ.

ಸಜ್ಜನ ಮತ್ತು ದುರ್ಜನರ ಸಹವಾಸವನ್ನು ಶರಣರ ಒಂದೇ ಮಾತಿನಲ್ಲಿ ಹೇಳುವುದಾದರೆ "ಸಾರ ಸಜ್ಜನರ ಸಂಗ ಲೇಸು ಕಂಡಯ್ಯ ದೂರ ದುರ್ಜನರ ಸಂಗ ಭಂಗ ಕಾಣ" ಸಜ್ಜನರ ಸಂಗ ಡೊಂಕು ಬಾಳೆಯ ಹಣ್ಣಿನಂತಿರ್ಪುದು. ಹಣ್ಣು ಡೊಂಕಾದರೂ ಅದು ಸಿಹಿಯಾಗಿರುವಂತೆ ಸತ್ಸಂಗದ ಫಲ ದುರ್ಜನರ ಸಹವಾಸ ಕೆಂಪು ಮೆಕ್ಕೆಯ ಜೋಳದಂತಿರ್ಪುದು. ಜೋಳ ಕೆಂಪಾಗಿ ಚನ್ನಾಗಿ ಕಂಡರೂ ಅಗಿದರೆ ಒಗರು, ಸಪ್ಪೆ, ಹಿಪ್ಪೆ ಮಾತ್ರ ದೊರೆಯುತ್ತದೆ. ಹೀಗೆ ದುರ್ಜನರ ಸಹವಾಸ, ನಿಸ್ಸಾರವಾದುದು ಅಂತ ವೇಳೆ ಯಾವ ವ್ಯಕ್ತಿಯೇ ಆಗಲಿ, ಬಾಳಪಥದಲ್ಲಿ ಶ್ರೇಷ್ಠತ್ವವನ್ನು ಪಡೆಯಬೇಕಾದರೆ ಸಜ್ಜನರ ಸಹವಾಸದಿಂದ ಮಾತ್ರ ಸಾಧ್ಯವಾದೀತು.



# ಬಸವ ಪ್ರತಿಜ್ಞೆ

—ಟಿ. ಎನ್ ಮಹದೇವಯ್ಯ

'ಹೊತ್ತಾರೆ ಎದ್ದು, ಕಣ್ಣ ಹೊಸೆವುತ್ತ, ಎನ್ನ ಒಡಲಿಂಗೆ ಎನ್ನ ಒಡನೆಗೆ, ಎನ್ನ ಮಡದಿ ಮಕ್ಕಳಿಗೆಂದು ಕುದಿದೆನಾದರೆ, ಎನ್ನ ಮನಕ್ಕೆ ಮನವೇ ಸಾಕ್ಷಿ. ಅಶನೇ, ಶಯನೇ, ಯಾನೇ, ಸಂಪರ್ಕೇ, ಸಹಭೋಜನೇ, ಸಂಚರಂತಿ ಮಹಾಘೋರೇ, ನರಕೇ ಕಾಲಮಕ್ಷಯಂ—ಎಂಬ ಶ್ರುತಿಯ ಬಸವಣ್ಣ ನೋಡುವನು. ಭವಿ ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹನೆಂದು ನುಡಿವರಯ್ಯ ಪ್ರಮಥರು. ಊರುವೆನುತ್ತರ ವನವರಿಗೆ, ಕೂರಲವ್ಯ. ಹೊಲೆ ಹೊಲೆಯರ ಮನೆಯ ಹೊಕ್ಕಾದರೆಯೂ ಸತಿ ಕೈಕೂಲಿಯ ಮಾಡಿದರೆಯೂ, ನಿಮ್ಮ ನಿಲವಿಂಗೆ ಕುದಿವೆನಲ್ಲದೆ, ಎನ್ನ ಒಡಲವಸರಕ್ಕೆ ಕುದಿವೆನಾದರೆ, ತಲೆದಂಡ, ಕೂಡಲಸಂಗಮದೇವಾ."

ಬೆಳಗಾದ ಕೂಡಲೆ ಮನುಷ್ಯನಿಗೆ ಸಾಧಾರಣವಾಗಿ ವ್ಯವಹಾರ ಚಿಂತೆ ಹೆಚ್ಚುವುದು. ನಿದ್ದೆ ಕಳೆದು ಎದ್ದು ಕುಳಿತರೆ ಹೊಟ್ಟೆಗೇನೆಂಬ ಗತಿ ಬರುತ್ತದೆ. ಆದರೆ ಭಗವದ್ಭಕ್ತರಿಗೆ ಹಾಗಲ್ಲ ಯಾವಾಗಲೂ ದೇವರ ಧ್ಯಾನವೆ. ಎದ್ದು ಕಣ್ಣು ಹೊಸಕುತ್ತಲೇ ದೇವ! ಕುಳಿತು ನಿಂತರೆ ದೇವ! ಹೀಗೆಂದು ದೇವರನ್ನು ತಾವು ಬಲು ಹತ್ತಿರಕ್ಕೆ ಸೆಳೆದು ತರುವರು. ಭಕ್ತರ ಭಕ್ತಿಯ ಬಲದಿಂದ ದೇವರು ಅವರ ಬಳಿಗೆ ಓಡಿ ಬರುವನು. ಅದನ್ನೇ ಸ್ವಾಮಿ ರಾಮತೀರ್ಥರು ಹೀಗೆಂದಿರುವರು. "ಪರಮೇಶ್ವರನು ಸರ್ವವ್ಯಾಪ್ತಿಯಾಗಿರುತ್ತಾನೆ. ಆದರೆ ನಿಮಗೆ ಆತ್ಮ ಕೃಪೆಯಿದ್ದರೆ ಅವನು ಸ್ವರ್ಗದಲ್ಲಿರಲಿ, ವೈಕುಂಠದಲ್ಲಿರಲಿ, ಬೇಕಾದಷ್ಟು ದೂರವಿರಲಿ, ಅವನಿಗೆ ನೀವು ನಿಮ್ಮ ಭಕ್ತಿ ವೈರಾಗ್ಯಗಳಿಂದ ನಿಮ್ಮ ಸಮೀಪಕ್ಕೆ ಬರುವಂತೆ ಮಾಡುತ್ತೀರಿ." ಇದೇ ಭಕ್ತರ ಬಲ್ಮೆ.

ಬಸವೇಶ್ವರನು ಮಹಾಭಕ್ತಯೋಗಿಯಾಗಿದ್ದರೂ ಭವಿಯಾದ ಬಿಜ್ಜಳನ ಕೈಕೆಳಗೆ ದಂಡಾಧೀಶನಾಗಿ ಇದ್ದುದೇಕೆ? ಎಂದು ಕೆಲವರು ಹೇಳುತ್ತಾರೆ. ಅದಕ್ಕೆ ಉತ್ತರವನ್ನು ಆತನೇ ಇಲ್ಲಿ ಹೇಳಿ ಬಿಟ್ಟಿರುತ್ತಾನೆ "ಪರಮಾತ್ಮನ ಸೇವೆಗಾಗಿ, ಪರರ ಹಿತಕ್ಕಾಗಿ, ನಾನು ಸೇವೆ ಮಾಡುತ್ತೇನೆ.—" ಎಂದು ತಿಳಿದು ನಿಷ್ಕಾಮ ಕರ್ಮ ಮಾಡಿದರೆ ಅದು ದೋಷಕಾರಿಯಾಗಲಾರದು. ಅವರೆಲ್ಲರೂ ತ್ಯಾಗದಿಂದ

ದೇವರನ್ನು ಕಾಣುತ್ತಾರೆ. ನೂರಾರು ತತ್ವಗಳಿಗಿಂತ ಒಂದು ಧರ್ಮದ ಕಾರ್ಯವು ದೇವರ ಬಗ್ಗೆ ಹೆಚ್ಚು ಪ್ರೀತಿಯನ್ನು ಕಲಿಸುತ್ತದೆ. ಪ್ರೀತಿ ಸಂಪಾದನೆಗಾಗಿ ಈ ವಿಧದ ಪ್ರೀತಿಯುಕ್ತವಾದ ತ್ಯಾಗವು ಬೇಕು. ಈ ಪ್ರೀತಿಯು ಸೇವೆಯೂ ಬೇಕು. ಇದು ಅತ್ಯಂತ ಶ್ರೇಷ್ಠತರವಾದ ಸೇವೆ ಪ್ರೀತಿಯು ಸೇವೆಗಿಂತ ಶ್ರೇಷ್ಠತರವಾದ ಸೇವೆಯೇ ಇಲ್ಲ. ಪರಮಾತ್ಮನಲ್ಲಿ ತಮಗಿರುವ ಪ್ರೀತಿಯೇ ಆನಂದವು. ಅದೇ ಅವರಿಗೆ ಶ್ರೇಷ್ಠತಮವಾದ ಸುಖ. ದೇವನಿಗೆ ಆನಂದದಿಂದ ಬೇಕಾದ ಸೇವೆಮಾಡಲು ಅವರು ಸಿದ್ಧರಿರುತ್ತಾರೆ. ತಮ್ಮ ಸರ್ವಸ್ವವನ್ನೂ ಅದಕ್ಕಾಗಿ ತ್ಯಜಿಸಿ ಬಿಡುತ್ತಾರೆ. ಇದನ್ನೆಲ್ಲ ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನು ಈ ರೀತಿ ಹೇಳಿರುತ್ತಾನೆ.

ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ।
ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾತ್ಮ ಶುದ್ಧಯೇ।

ಯೋಗಿ ಜನರು ಚಿತ್ತ ಶುದ್ಧಿಗೋಸ್ಕರ ಆಸಕ್ತಿಯನ್ನು ಬಿಟ್ಟು ದೇಹದಿಂದಲೂ, ಮನಸ್ಸಿನಿಂದಲೂ, ಬುದ್ಧಿಯಿಂದಲೂ, ಕೇವಲ ಇಂದ್ರಿಯಗಳಿಂದಲೂ ಸಹ ಪಿಹಿತ ಕರ್ಮಾನುಷ್ಠಾನ ಮಾಡುತ್ತಾರೆ. ಈ ನಿಷ್ಕಾಮ ಕರ್ಮವು ಪ್ರೇಮಯುಕ್ತವಾದುದರಿಂದ ಅದು ಅವರ ಹೃದಯವನ್ನು ಪರಿಶುದ್ಧಿಗೊಳಿಸುತ್ತದೆ. ಪ್ರೇಮವು ಮನುಷ್ಯನ ಕುಹುಕ ಭಾವನೆಗಳನ್ನು ಸುಡುವ ಶ್ರೇಷ್ಠ ಜ್ಯೋತಿಯಾಗಿರುತ್ತದೆ. ಆದುದರಿಂದ ಮಹಾ ಪುರುಷರೆಲ್ಲರೂ ಪ್ರೇಮಿಗಳಾಗುತ್ತಾರೆ ಜಗತ್ತಿನ ಸೇವೆ ಮಾಡುತ್ತಾರೆ ಮಹಾತ್ಮ ಗಾಂಧೀಜಿಯವರು ಹೇಳುವಂತೆ ತನ್ನ ಬಾಂಧವರ ಸೇವೆಯಲ್ಲಿ ಯಾವಾತನು ತೊಡಗುವನೋ ಅಂತಹ ಸಹೃದಯವನ್ನು ಆಸನವನ್ನಾಗಿ ಮಾಡಿಕೊಳ್ಳುವುದಕ್ಕಾಗಿ ಪರಮಾತ್ಮನು ತಾನಾಗಿಯೇ ಹುಡುಕುತ್ತ ಬರುವನು.

ಪರಸೇವೆ ಮಾಡುವ ಆನಂದವೇ ಅವರಿಗೆ ಸುಖಕರವು ಆ ಆನಂದದ ಬಲದಿಂದಲೇ ತನು ತೊರೆದು ಹೆಂಡತಿ ಮಕ್ಕಳ ವ್ಯಾಮೋಹವನ್ನು ಬಿಟ್ಟು, ಜಗತ್ತಿನ ಎಲ್ಲ ಸಿರಿಯನ್ನು ಬಿಟ್ಟು, ಅತ್ಯಂತ ಶ್ರೇಷ್ಠತಮವಾದ ಆನಂದವನ್ನು ಹೊಂದುವರು ಅದಕ್ಕಾಗಿ ಬೇಕಾದ ಕಾರ್ಯವನ್ನು ಕೈಗೊಳ್ಳುವರು. ಪರಹಿತಕ್ಕಾಗಿ ಕರ್ಮ ಮಾಡುತ್ತಿರುವುದರಿಂದ ಬೇಕಾದ ಕೆಲಸಮಾಡಿ ದುಡ್ಡು ಸಂಪಾದಿಸ ಬಹುದು. ಸ್ವಾರ್ಥಕ್ಕಾದರೆ ಪಾಪ ಸಂಭವಿಸುವುದು. ಸಂಪಾದನೆಯಲ್ಲಿ ಆಸಕ್ತಿಯಿಟ್ಟು ಕೆಲಸ ಮಾಡುವುದಿಲ್ಲ. ಸೇವೆಯು ಪ್ರತಿಫಲವನ್ನಾಶಿಸುವುದಿಲ್ಲ. ದೇವನ ಸೇವೆಮಾಡಿದ ಒಂದೇ ಹಿರಿ ಆನಂದವು ಅವರ ಹೃದಯವನ್ನು ಪೂರ್ಣವಾಗಿ ತುಂಬಿ ಬಿಟ್ಟಿರುತ್ತದೆ. ಆ ಆನಂದದ ಸುಖವು ಅವರಿಗೆ ತನುವಿನ ಮೇಲಿನಾಶೆಯ ಸುಖ, ವ್ಯಾಮೋಹಗಳ ಸುಖ, ಸಿರಿಯ ಸುಖ ಮೊದಲಾದ ನೂರಾರು ನಶ್ವರ ಸುಖಗಳಿಗಿಂತ ಕೋಟಿ ಕೋಟಿ ಪಾಲು ಹೆಚ್ಚಾಗಿರುತ್ತದೆ. ದೇವನ ಬಗ್ಗೆ ಅವರಲ್ಲಿ ಹುಟ್ಟುವ ಪ್ರೇಮವು



ಅಷ್ಟು ಶ್ರೇಷ್ಠತರಗತಿಯದಾಗಿರುತ್ತದೆ. ಇದನ್ನು ಅರವಿಂದ ಘೋಷರು ಹೀಗೆ ಹೇಳಿರುವರು "ಪ್ರತಿಫಲದ ಆಶೆ ಕೂಡದು ಮತ್ತು ಬಹುಮಾನಕ್ಕಾಗಿ ಹಂಬಲಿಸ ಬಾರದು. ದೇವಮಾತೆಯ ಪ್ರೀತಿ, ಮತ್ತು ಆಕೆಯ ಕರ್ತವ್ಯವು ಪೂರ್ಣತೆಗಳ ಆನಂದವೊಂದೇ ಫಲರೂಪವಾಗಲಿ" ಇದೇ ಅವರ ಜೀವನದ ಮುಖ್ಯ ಭಾವನೆಯಾಗಿದೆ. ಬಸವೇಶ್ವರರ ದೇವರ ಮೇಲಿನ ಪ್ರೀತಿ, ನಿಸ್ವಾರ್ಥ ಭಾವನೆ, ಸೇವೆಯ ಮಹತ್ವಾಕಾಂಕ್ಷೆಗಳು ಈ ವಚನದಲ್ಲಿ ಹೊರಗೆಡವಲ್ಪಟ್ಟಿವೆ.

ಮುಂಜಾನೆ ಎದ್ದು ನನಗಾಗಿಯಾಗಲಿ, ನನ್ನ ಸಿರಿಗಾಗಿಯಾಗಲಿ, ನನ್ನ ಹೆಂಡತಿ ಮಕ್ಕಳಿಗಾಗಿಯಾಗಲಿ ನೆನೆದರೆ ನನ್ನ ಮನವೇ ಅದಕ್ಕೆ ಸಾಕ್ಷಿಯಾಗಿರಲಿ. ಊಟ ಮಾಡುವುದು, ನಿದ್ರಿಸುವುದು, ಓಡಾಡುವುದು, ಕೂಡಿಮಾಡುವುದು, ಭೋಜನ ಮಾಡುವುದು, ಮೊದಲಾದ ತುಚ್ಛವಿಷಯ ವಾಸನೆಗಳ ಸಂಬಂಧದ ವ್ಯವಹಾರದಲ್ಲಿ ವರ್ತಿಸುವನು ಅನಂತ ಕಾಲದವರೆಗೆ ಘೋರನರಕವನ್ನು ಅನುಭವಿಸುವನು ಎಂದು ಶ್ರುತಿ ಪ್ರಮಾಣವಿರುತ್ತದೆ. ನಾನು ಬಿಜ್ಜಳನ ಸಿಂಹಾಸನದ ಬಳಿ ಕುಳಿತು ಅವನ ಸೇವೆ ಮಾಡುತ್ತಿರುವೆನೆಲ್ಲಾ ಎಂದು ಪ್ರಮಥರು ಅವನು ಭವಿಯಾದ ಕಾರಣದಿಂದ ನನ್ನ ಮೇಲೆ ಟೀಕೆ ಮಾಡುವರು ಅವರಿಗೆ ಉತ್ತರವನ್ನು ಹೇಳುತ್ತೇನೆ. ಹೊಲೆ ಹೊಲೆಯರ ಮನೆ ಮನೆಗೂ ಹೋಗಿ, ನನ್ನ ದೇಹದಂಡನೆಮಾಡಿ ಕೂಲಿಯಿಂದಲಾದರೂ, ನಿಮ್ಮ ಸೇವೆ ಮಾಡುತ್ತೇನೆ ನಿಮ್ಮ ಸೇವೆಗೇ ನನ್ನ ಎಲ್ಲ ಕರ್ಮಗಳು ಅರ್ಪಿತವಾಗುತ್ತಿರಲಿ ನಿಮ್ಮ ಸೇವೆಯನ್ನು ಬಿಟ್ಟು ತನ್ನ ದೇಹದ ಆಶೆಗೆ ಎಂದಾದರೂ ನಾನು ಆಶಿಸುವುದಿಲ್ಲ. ಹಾಗೆ ಮಾಡಿದರೆ ಪರಮಾತ್ಮ ನಿನ್ನಾಣೆಯಿರಲಿ.

---

# ಬಸವರಸರ ಲೀಲೆಗಳು—2


ಹೆಚ್. ಜಿ. ರಾಧಾದೇವಿ
ನಂ. 12-1-71/4 ಗಂಜ್ ರಸ್ತೆ, ರಾಯಚೂರು-584101


## ಬಾಲ್ಯ

ಹಾಲಿನಿಂದ ಜಿಗಿದ ಶಿಶು ಎಂದು ಕೆಲವರು....ನಂದೀಶ್ವರನ ಬಾಯಿಂದ ಉದುರಿದ ಶಿಶು ಎಂದು ಕೆಲವರು ಆ ಮಗುವಿನ ಬಗ್ಗೆ ವಿವಾದ ಹೂಡುತ್ತಾರೆ.

ಶಿವನ ಅಭಿಷೇಕ ಕ್ಷೀರವಾದ ಸುವ್ವಲಾಲಿ
ಹರಿದು ಬಂದ ಶಿಶುವೆಂದು ಸುವ್ವಲಾಲಿ
ಶಿವರುದ್ರರೆಂದು ಕರೆಯುತ್ತ ಸುವ್ವಲಾಲಿ
ತೂಗಿದರೆ ತೊಟ್ಟಿಲಲ್ಲಿ ಸುವ್ವಲಾಲಿ

ಶಿವರುದ್ರರೆಂದು ಕರೆದಾಗ ಮಗು ಕಣ್ಮುಚ್ಚಿ ನಿಶ್ಚೇತನವಾಗುತ್ತದೆ. ಆಗ ಎಲ್ಲರೂ ಹೆದರಿ ಸಿದ್ಧಗುರು ಮಲ್ಲಪ್ಪನ ಮೊರೆಹೋಗುತ್ತಾರೆ. ಮಾದರಸನ ಹಿತ ಬಯಸುವ ಮನೆ ಪುರೋಹಿತ ನೀತ

ನಂದಿಕೊಟ್ಟ ಶಿಶುವೆಂದು ಸುವ್ವಲಾಲಿ
ನಂದೀಶನ್ನ ಹೆಸರಿಡಿರೊ ಸುವ್ವಲಾಲಿ
ವೃಷಭ ಕೊಟ್ಟ ಶಿಶುವೆಂದು ಸುವ್ವಲಾಲಿ
ಬಸವನೆಂದು ಕರೆಯಿರೋ ಸುವ್ವಲಾಲಿ॥

ಏನಾಶ್ಚರ್ಯ! ಬಸವನೆಂದು ಕರೆದಾಗ ಶಿಶು ಕಣ್ತೆರದು ಮುಗುಳ್ನಗುತ್ತದೆ ಈಗ ಊರ ಹೆಂಗಳೆಯರೆಲ್ಲ ಮಗುವನ್ನು ಸಿಂಗರಿಸುತ್ತಾರೆ.

ಅರಳೆಲೆ ಮಾಗಾಯಿ ಕಿವಿಗೆ ಸುವ್ವಲಾಲಿ
ಬೆರಳಿಗುಂಗುರವಿಟ್ಟು....ಸುವ್ವಲಾಲಿ
ಕುರುಳು ತಿದ್ದಿ ಕರಿಯ ಕಾಡ್ಗೆ ಸುವ್ವಲಾಲಿ
ಜರಿಯ ಅಂಗಿ ತೊಡಸಿದಾರೊ ಸುವ್ವಲಾಲಿ

ಮತ್ತೆ ಮಗುವನ್ನು ಮಲಗಿಸುವ ತೊಟ್ಟಿಲು ಹೇಗಿದೆಯೆಂದರೆ....

ಚಿನ್ನದ ತೊಟ್ಟಿಲಿಗೆ ಸುವ್ವಲಾಲಿ
ರನ್ನದ ಸರಪಣಿ ಬಿಗಿದು ಸುವ್ವಲಾಲಿ

ಚೆನ್ನಾದ ರೇಷಿಮೆ ವಸ್ತ್ರಹಾಸಿ ಸುವ್ವಲಾಲಿ
ಕನ್ನೆಯರು ತೂಗಿದರಾಗ ಸುವ್ವಲಾಲಿ

ಹಸೆಯ ಮೇಲೆ ಮಗುವನ್ನೆತ್ತಿ ಕುಳಿತ ಮಾದಲಾಂಬಿಕೆಯನ್ನಂತು ಇನ್ನೊಮ್ಮೆ ನೋಡುವಂತಿತ್ತು.

ಅಣಿಮುತ್ತಿನಾಭರಣ ಓಲೆಸರ ಸುವ್ವಲಾಲಿ
ಬಾಲೆ ಮಾದಮ್ಮ ಉಟ್ಟಾಳೆ ತೊಟ್ಟಾಳೆ ಸುವ್ವಲಾಲಿ
ಶಾಲು ಹೊದ್ದು ತಾಂಬೂಲ ಮೆದ್ದು ಸುವ್ವಲಾಲಿ
ಹಸೆಮಣೆಯ ಮೇಲೆ ಕೂತಾಳೆ ಸುವ್ವಲಾಲಿ

ಕನ್ನೆಯರು ತಾಯಿ ಮಗುವಿಗೆ ಆರತಿಯನ್ನು ಮಾಡುತ್ತಾರೆ. ಆದರೆ ಅದೊಂದು ವಿಚಿತ್ರ ಶಿಶು, ಮತ್ತೆ ಸಮಸ್ಯೆ ಮಾಡುತ್ತದೆ.

ಹಾಲು ತಂದು ಕುಡಿಸಿದರೆ ಸುವ್ವಲಾಲಿ
ಬಾಯಿ ತೆರೆಯದು ಶಿಶುವು ಸುವ್ವಲಾಲಿ
ತೊಟ್ಟಿಲಾಗೆ ತೂಗಿದರೆ ಸುವ್ವಲಾಲಿ
ನಿದ್ರಿಸಾದೆ ಚೀರುವುದು ಸುವ್ವಲಾಲಿ

ಈ ಮಗುವನ್ನು ಸಂತೈಸಲು ಊರ ಹೆಂಗಳೆಯರೆಲ್ಲ ಸೋತು ಹೋಗುತ್ತಾರೆ.

ಏಳು ದೇವರ ಹೆಸರಲ್ಲಿ ಸುವ್ವಲಾಲಿ
ಮೀಸಲು ತೆಗೆದಿಟ್ರೊ ಬೇಗ ಸುವ್ವಲಾಲಿ
ಏಳು ಎರಡು ಗ್ರಹಕೆ ಆಗ ಸುವ್ವಲಾಲಿ
ಜಪವ ತಪವ ಮಾಡಿಸಿದ್ರೊ ಸುವ್ವಲಾಲಿ

ಇದು ಮಾದರಸನ ಕೆಲಸವಾದರೆ ಮಾದಲಾಂಬಿಕೆಯರು

ಪೊರಕೆ ಸುಟ್ಟು ನಿವಾಳಿಸಿ ಸುವ್ವಲಾಲಿ
ಹರಿಕೆ ಕಟ್ಟಿ ಮೀಸಲಿಟ್ರೊ ಸುವ್ವಲಾಲಿ
ಕರಿಯ ಉಪ್ಪು ನಿವಾಳಿಸಿ ಸುವ್ವಲಾಲಿ
ಹರಿಯೊ ನೀರಿಗೆ ಚೆಲ್ಲಿದಾರೆ ಸುವ್ವಲಾಲಿ

ಆದರೆ ಇದಾವುದರಿಂದಲು ಶಿಶುವನ್ನು ಸಂತೈಸಲಾಗಲಿಲ್ಲ. ಆಗ ಮತ್ತೆ ಎಲ್ಲರೂ ಸಿದ್ಧ ಗುರು ಮಲ್ಲಪ್ಪನ ಮೊರೆ ಹೋಗುತ್ತಾರೆ. ಆಗ ಮಲ್ಲಪ್ಪ ಹೊತ್ತಿಗೆ ತೆಗೆದು

ಶಿವನ ಅಭಿಶೇಕದ ಹಾಲು ಸುವ್ವಲಾಲಿ
ಶಿಶುವಿಗೆ ಶುದ್ಧಹಾರ ಸುವ್ವಲಾಲಿ



ಶಿವನಾಮ ಸ್ಮರಣೆ ಮಂತ್ರ ಸುವ್ವಲಾಲಿ
ತೂಗಿದರೆ ನಿದ್ರೆ ಇವಗೆ ಸುವ್ವಲಾಲಿ

ಸರಿ ಅಂದಿನಿಂದ ಅದೇ ಶಿಶುವಿಗೆ ಅಭ್ಯಾಸವಾಯಿತು. ನಂದಿಕೇಶ್ವರನ ಅಭಿಷೇಕ ಮಾಡಿದ ಹಸಿಯ ಹಾಲೆ ಆ ಶಿಶುವಿಗೆ ಆಹಾರ, ಶಿವನಾಮ ಮಂತ್ರ ಜೋಗುಳವೆ ಮಗುವಿನ ನಿದ್ರೆ ಸಾಧನ,

ಕೈಲಾಸದೊಡೆಯ ನಾರು ಸುವ್ವಲಾಲಿ
ನಮ್ಮ ಪಾರ್ವತಿ ರಮಣ ಸುವ್ವಲಾಲಿ
ಪಾರ್ವತಿ ರಮಣ ನಾರು ಸುವ್ವಲಾಲಿ
ಶಿವರುದ್ರನೆಂದು ಜೋ ಜೋ ಸುವ್ವಲಾಲಿ

ಹೀಗೆ ಒಗಟು ಹಾಡಿ ಜೋ ಜೋ ಮಾಡಿದರೆ ಮಗು ನಗು ನಗುತ್ತ ನಿದ್ರಿಸುತ್ತದೆ.

ಗಣಪನ್ನ ತಂದೆ ಯಾರು ಸುವ್ವಲಾಲಿ
ದೇವ ಶಿವರುದ್ರರು ಸುವ್ವಲಾಲಿ
ಗಂಗೇಯ ಹೊತ್ತೋರ್ಯಾರು ಸುವ್ವಲಾಲಿ
ದೇವ ಶಿವರುದ್ರರು ಸುವ್ವಲಾಲಿ

ಮಗು ಬೆಳೆಯುತ್ತ ಬೆಳೆಯುತ್ತ ಮೂರು ತಿಂಗಳು ಧಾಟಿ ಆರು ತಿಂಗಳು ಕಳೆಯಿತು. ಮಗ್ಗುಲಾಗಿ, ಬೋರಲು ಬಿದ್ದು, ಹೊಟ್ಟೆ ಹೊಸದು ಮುಂದೆ ಸರಿಯುತ್ತಾನೆ. ಮುಂದೆ ಮುಂದೆ ತಾನು ಸರಿಯುವಾಗಲು ಶಿವ ನಾಮವೆ ಬೇಕು ಈ ಮಗುವಿಗೆ

ಕಾಶಿಯುಂಟು ಮುಂದೆ ಬಾರೊ ಸುವ್ವಲಾಲಿ
ಕಾಶಿ ವಿಶ್ವೇಶ್ವರ ಸಿಗುತಾನೆ ಸುವ್ವಲಾಲಿ
ಕೇದಾರ ನಿನಗುಂಟು ಸರಿಯೋ ಸುವ್ವಲಾಲಿ
ಕೇದರೇಶ್ವರ ಸಿಗುತಾನೆ ಶಿಶುವೆ ಸುವ್ವಲಾಲಿ ॥

ಹೀಗೆ ಆಡಿಸಿದರೆ ಶಿಶು ಹೊಟ್ಟೆ ಹೊಸೆದು ಮುಂದೆ ಮುಂದೆ ಬಂದು ಮನೆಯೆಲ್ಲ ಅಡ್ಡಾಡುತ್ತಾನೆ. ಮಗುವಿಗೆ ವರ್ಷ ತುಂಬಿತು ಶಿವಲಿಂಗ ಅಭಿಷೇಕದ ಹಸಿ ಹಾಲು ಬಿದು ಬೇರೇನು ತಿನ್ನದು ಉಣ್ಣದು, ದಟ್ಟಡಿ ಇಡುವಾಗ ಹನ್ನೆರಡು ಶಿವಕ್ಷೇತ್ರಗಳ ಸ್ಮರಣೆಯಲ್ಲಿ ಹನ್ನೆರಡು ಹೆಜ್ಜೆ ಇಡುತ್ತದೆ ಮಗು.

ಕಾಶಿಗೊಂದು ಹೆಜ್ಜೆ ಬಾರೋ ಸುವ್ವಲಾಲಿ
ಕಾಶಿ ವಿಶ್ವೇಶ್ವರ ಸಿಗುತಾನೆ ಸುವ್ವಲಾಲಿ
ಶ್ರೀ ಶೈಲಕ್ಕೊಂದು ಹೆಜ್ಜೆ ಹಾಕೊ ಸುವ್ವಲಾಲಿ
ಮಲ್ಲಿಕಾರ್ಜುನ ಸಿಗುತ್ತಾನೆ ಸುವ್ವಲಾಲಿ

ಮಗುವಿನ ವರ್ಷದ ಹುಟ್ಟಿದ ಹಬ್ಬ ವಿಜೃಂಭಣೆಯಿಂದ ನೆರವೇರುತ್ತದೆ. ಮಾರನೆ ದಿನ ಮಗುವಿಗೆ ಜರಿಯ ಕಿಂಕಾಪಿನ ಅಂಗಿ ತೊಡಿಸಿ, ತಲೆಗೆ ಮುತ್ತಿನ ತುರಾಯಿಟ್ಟು ವಿಭೂತಿ ಹಣೆಗಿಟ್ಟು ಅಲಂಕರಿಸುತ್ತಾರೆ. ಆದರೆ ಇದಕ್ಕಿದ್ದಂತೆ ಮಗು ನಾಪತ್ತೆಯಾಗಿರುತ್ತದೆ. ಊರಿನ ಜನರೆಲ್ಲ ಸೇರಿ ದಿಕ್ಕು ದಿಕ್ಕು ದೆಸೆಗೆಟ್ಟು ಹುಡುಕುತ್ತಾರೆ.

ಓಣಿ ಓಣಿ ಗೋಡಿ ಗುಮ್ಮಿ ಸುವ್ವಲಾಲಿ
ಹತ್ತಿದರೆ....ಹಾರಿ ಹುಡುಕಿದರೆ ಸುವ್ವಲಾಲಿ
ತಿರುವು ತಿರುವಿನಲ್ಲಿ ಹರಿದು ಸುವ್ವಲಾಲಿ
ಊರ ತುಂಬ ಹುಡುಕಿದರೆ ಸುವ್ವಲಾಲಿ

ಆದರೆ ಶಿಶು ಬಸವ ಸಿಗಲಿಲ್ಲ. ಈ ಭಾರಿ ಸಿದ್ಧಗುರು ಮಲ್ಲಪ್ಪನು ದಿಗ್ಭ್ರಾಂತನಾಗುತ್ತಾನೆ. ಸಂಜೆ ಊರ ನಂದಿಕೇಶ್ವರ ದೇವಾಲಯದ ಬೀಗ ತೆರೆದ ಪೂಜಾರಿ ಶಿವಲಿಂಗದೆದುರು ಅಂಬೆಗಾಲಿಟ್ಟು ಕೂತಿರುವ ಮಗು ಕಂಡು ಚಕಿತನಾಗುತ್ತಾನೆ. ಹಾಕಿದ ಬೀಗ ಹಾಕಿದಂತೆಯೇ ಇದೆ. ಆದರೆ ಮಗು ಒಳ ಸೇರಿದ ಪರಿ ಹೇಗೆ? ಮಗುವನ್ನು ಯಾರೂ ದೇವಾಲಯಕ್ಕೆ ಖಂಡಿತ ಕರೆ ತಂದಿಲ್ಲ, ದಟ್ಟಡಿ ಇಡುವ ಆ ಶಿಶು ಶಿವಾಲಯದ ಒಳಹೊಕ್ಕು ಗರ್ಭಗುಡಿಯಲ್ಲಿ ಶಿವಲಿಂಗದೆದುರು ಮಲಗಿದ್ದು ಒಂದು ಪವಾಡವೆನಿಸುತ್ತದೆ.





# ಬೃಹತ್ತರ ಭಾರತದ ಬಾಲಿ ದ್ವೀಪದಲ್ಲಿ — ಶೈವ ಸಂಪ್ರದಾಯ

—: ಶ್ರೀ. ಎ. ಹೆಚ್.
ಅಧ್ಯಾಪಕರು, ಜಿ. ವಿ. ಪಿ. ಪ್ರೌಢಶಾಲೆ, ಹಂದನಕೆರೆ, ಚಿಕ್ಕನಾಯಕನ ಹಳ್ಳಿ ತಾ॥ ತುಮಕೂರು ಜಿಲ್ಲೆ.

ಭಾರತದ ಪೂರ್ವಕ್ಕೆ ಬರ್ಮಾ ದೇಶವಿದೆ. ಬರ್ಮಾ ಮತ್ತು ಸಯಾಂಗಳಿಂದ ದಕ್ಷಿಣ ಪೂರ್ವದಲ್ಲಿ ಸಾಗರ ಮಧ್ಯದಲ್ಲಿರುವ ದ್ವೀಪಗಳ ಸಮೂಹಕ್ಕೆ ಬೃಹತ್ತರ ಭಾರತವೆಂದು ಕರೆಯುತ್ತಾರೆ.

ಬೃಹತ್ತರ ಭಾರತದಲ್ಲಿ ಮುಖ್ಯ ದ್ವೀಪಗಳೆಂದರೆ ಇಂಡೋ ಚೈನಾ, ಬಾಲಿ, ಮಲಯ, ಜಾವ ಮತ್ತು ಸುಮಾತ್ರಾ ದ್ವೀಪಗಳು. ಇವುಗಳು ಬಹಳ ಹಿಂದಿನ ಕಾಲದಲ್ಲಿ ಭಾರತದೊಂದಿಗೆ ನಿಕಟ ಸಂಪರ್ಕವನ್ನು ಹೊಂದಿದ್ದವೆಂಬುದಕ್ಕೆ ಸಾಕಷ್ಟು ಆಧಾರಗಳು ಸಿಗುತ್ತವೆ.

ಪ್ರಾಚೀನ ಭಾರತದ, ಅದರಲ್ಲೂ ದಕ್ಷಿಣ ಭಾರತದ ನಿವಾಸಿಗಳು ಸಾಗರದಲ್ಲಿ ಸಂಚಾರ ಮಾಡುತ್ತಿದ್ದ ಅತ್ಯಂತ ಧೈರ್ಯಶಾಲಿ ಜನಗಳಾಗಿದ್ದರು. ಇತಿಹಾಸದ ಪ್ರಾಚೀನ ಪುಟಗಳನ್ನು ನಾವು ತಿರುವಿ ನೋಡಿದಾಗ, ನಮಗೆ ದಕ್ಷಿಣ ಭಾರತದ ನಿವಾಸಿಗಳ ಬಗ್ಗೆ ತಿಳಿದು ಬರುವ ಮುಖ್ಯ ವಿಷಯವೆಂದರೆ ಅವರು ತಮ್ಮ ಧರ್ಮ ಮತ್ತು ಸಂಸ್ಕೃತಿಗಳ ಪ್ರಚಾರಕ್ಕೋಸ್ಕರ ಭಾರತದ ಪೂರ್ವ ಮತ್ತು ಪಶ್ಚಿಮ ರಾಷ್ಟ್ರಗಳಲ್ಲಿ ನಿರ್ಭೀತರಾಗಿ ಸಂಚರಿಸುತ್ತ ಪ್ರಸಾರೋಪದೇಶ ಕಾರ್ಯಗಳನ್ನು ಕೈಗೊಂಡಿದ್ದರು. ಧರ್ಮ ಪ್ರಸಾರದ ಜೊತೆಯಲ್ಲಿ ತಮ್ಮ ಜೈವಿಕ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವ ಸಲುವಾಗಿ ವ್ಯಾಪಾರವನ್ನು ಸಹ ಮಾಡುತ್ತಾ ಪರಸ್ಪರ ಧಾರ್ಮಿಕ, ಸಾಂಸ್ಕೃತಿ ವಿನಿಮಯಕ್ಕೆ ನಾಂದಿಯಾಗಿದ್ದರು. ಈ ಆದಾನ ಪ್ರದಾನಗಳಿಂದ ಭಾರತದ ಪ್ರಾಚೀನ ಧಾರ್ಮಿಕ ಪ್ರಭಾವಗಳು ಭಾರತದ ದಕ್ಷಿಣ ಪೂರ್ವ ದ್ವೀಪಗಳಲ್ಲಿ ಇಂದಿಗೂ ಸ್ಪಷ್ಟವಾಗಿ ಗೋಚರಿಸುತ್ತವೆಂದು ತಿಳಿಯ ಬಹುದು.

## ಶೈವ ಸಂಪ್ರದಾಯದ ಪ್ರಾಚೀನತೆ

ಶೈವ ಧರ್ಮವು ಒಂದು ಸ್ವತಂತ್ರ ಪ್ರಾಚೀನ, ಪ್ರಾಗ್ವೈದಿಕ ಧರ್ಮ. ಭಾರತದಲ್ಲಿ ಪ್ರಾಚೀನ ಧಾರ್ಮಿಕ ಸ್ಥಾನಮಾನಗಳು ವೀರಶೈವ ಧರ್ಮಕ್ಕೆ ಸಲ್ಲಬೇಕಾಗಿದೆ.

ದ್ರಾವಿಡರ ಈ ಧರ್ಮವು ಪ್ರಪಂಚಕ್ಕೆ ಅತ್ಯುತ್ತಮವಾದ ಒಂದು ನೈತಿಕ ಕೊಡುಗೆಯನ್ನು ಕೊಟ್ಟಿದೆ. ಶೈವಧರ್ಮಕ್ಕಿಂತ ಮುಂಚೆ ಭಾರತದಲ್ಲಿ ಯಾವುದೇ ಇತರ ಧಾರ್ಮಿಕ ಲಕ್ಷಣಗಳಲ್ಲೂ ಕಂಡು ಬರುವುದಿಲ್ಲ.

ಕೆಲವು ವಿದ್ವಾಂಸರ ಅನುಮಾನದಂತೆ ದ್ರಾವಿಡರು ಆರ್ಯರಂತೆಯೇ ಭಾರತಕ್ಕೆ ಕ್ರಿ. ಪೂ. 3500 ರಲ್ಲಿ ಭೂಮಧ್ಯ ಸಾಗರದ ಭೂ ಪ್ರದೇಶಗಳಿಂದ ಬಂದು ನೆಲೆಸಿದ್ದರೆಂದೂ, ಅಲ್ಲಿಯ ಪೂರ್ವಜರಲ್ಲಿ ಸರ್ಪ ಪೂಜೆ, ಮತ್ತು ವೃಷಭವಾಹಕ ದೇವಿಯ ಪೂಜೆ ನಡೆಯುತ್ತಿತ್ತೆಂದು ಹೇಳುವರು ಈ ನಂಬಿಕೆ ಒಂದು ವೇಳೆ ನಿಜವಾದಲ್ಲಿ ಈ ಜನಾಂಗವು ಆರ್ಯರಿಗಿಂತ ಮೊದಲೇ ಭಾರತದಲ್ಲಿ ನೆಲಸಿ "ಶೈವ" ಧರ್ಮ ಮತ್ತು ಸಂಸ್ಕೃತಿಯ ಮೂಲ ಪ್ರತಿಪಾದಕರಾಗಿದ್ದರೆಂದು ನಂಬಬಹುದು. ಈ ಧೈರ್ಯಶಾಲಿ ಜನಾಂಗದ ಒಂದು ಭಾಗ ಭಾರತವನ್ನು ಬಿಟ್ಟು ಪೂರ್ವ ದ್ವೀಪಗಳ ಕಡೆ ವಲಸೆ ಹೋಗಿ ಬೃಹತ್ತರ ಭಾರತದ ಬಾಲಿ ದ್ವೀಪದಲ್ಲಿ ನೆಲಸಿ ಶೈವ ಧರ್ಮವನ್ನು ನಿಷ್ಠಾಪೂರ್ವಕವಾಗಿ ಪಾಲಿಸುತ್ತಿರ ಬಹುದೆಂದು ನಂಬಬಹುದಾಗಿದೆ

ಬಾಲಿ ದ್ವೀಪ

ಸ್ವಾಮಿ ಸದಾನಂದರು ತಮ್ಮ ಗ್ರಂಥ "ಹಿಂದೂ ಕಲ್ಚರ್ ಇನ್ ಗ್ರೇಟರ್ ಇಂಡಿಯಾ" (Hindu culture in greater India) ದಲ್ಲಿ ಹೀಗೆನ್ನುತ್ತಾರೆ. "ಬಾಲಿ ದ್ವೀಪದಲ್ಲಿ ಶೈವ ಧರ್ಮವು ಯಾವ ಪವಿತ್ರತೆಯುಲ್ಲಿ ಬದುಕುತ್ತಿದೆಯೋ ಆ ಪವಿತ್ರತೆಯು ಈಗ ಭಾರತದಲ್ಲಿ ಉಪಲಬ್ಧವಿಲ್ಲ" ಅಂದರೆ ಅಲ್ಲಿ ಭಾರತಕ್ಕಿಂತ ನೈಜ ಶೈವ ಧಾರ್ಮಿಕತೆಯನ್ನು ಕಾಣಬಹುದಾಗಿದೆ.

ಬೃಹತ್ತರ ಭಾರತದ ದ್ವೀಪಗಳಾದ ಮಲಯಾ, ಜಾವ, ಸುಮತ್ರಾಗಳಲ್ಲಿ ಭಾರತದಲ್ಲಿದ್ದಂತೆಯೇ, ವಿವಿಧ ಧರ್ಮ, ಸಂಸ್ಕೃತಿಗಳ ಪಾಲನೆ ಮಾಡಿಕೊಂಡು, ಹಿಂದೂ ಮುಸಲ್ಮಾನರು, ಕ್ರೈಸ್ತರು ಒಟ್ಟಾಗಿ ಬಾಳುತ್ತಿರುವ ಭೂಖಂಡಗಳಾಗಿವೆ. ಆದರೆ ಬಾಲಿ ದ್ವೀಪವು ಮಾತ್ರ ಸಂಪೂರ್ಣ ಶೈವಧಾರ್ಮಿಕತೆಯ ದ್ಯೋತಕವಾಗಿದೆ. ಇಲ್ಲಿಯ ಶೇಕಡ ತೊಂಬತ್ತು ಭಾಗ(90 %) ಶೈವ ಸಂಪ್ರದಾಯಸ್ಥರು.

ಬಾಲಿ ದ್ವೀಪವು ಭಾರತದಿಂದ ಸುಮಾರು (3000) ಮೂರು ಸಾವಿರ ಮೈಲಿಗಳ ಅಂತರದಲ್ಲಿ ಸುಮಾತ್ರಾ ದ್ವೀಪಕ್ಕೆ ಪೂರ್ವದಲ್ಲಿದೆ. ಇದರ ವಿಸ್ತೀರ್ಣ ಸುಮಾರು 2243 ಚದುರ ಮೈಲಿಗಳು. ಇಲ್ಲಿನ ಜನಸಂಖ್ಯೆ 18 ಲಕ್ಷ ಮಾತ್ರ.



ಬಾಲಿ ದ್ವೀಪದ ಸಂಸ್ಕೃತಿ

ಭಾರತದ ಇಂದಿನ ವೀರಶೈವ ಸಂಪ್ರದಾಯಗಳಿಗೂ, ಬಾಲಿದ್ವೀಪದ ಆಧ್ಯಾತ್ಮಿಕ ಸಂಪ್ರದಾಯಗಳಿಗೂ ಅಲ್ಪ ಸ್ವಲ್ಪ ವ್ಯತ್ಯಾಸಗಳಿದ್ದರೂ ಮೂಲ ಸಾಂಸ್ಕೃತಿಕ ಆಚರಣೆಗಳಲ್ಲಿ ಹೆಚ್ಚು ವ್ಯತ್ಯಾಸಗಳಿಲ್ಲ. ತಮ್ಮ ಮತ ಗ್ರಂಥಗಳನ್ನು ತಾವು ಆಡುವ "ಮಲಾಯೀ" ಭಾಷೆಗಳಲ್ಲಿ ರಚಿಸಿಕೊಂಡು ಶಿವ ನಿರ್ಮಿತ ಆಗಮಗಳೆಂದು ನಂಬುತ್ತಾರೆ. ಇದರಂತೆ ಅಲ್ಲಿನ ಸ್ತ್ರೀಯರಿಗೆ ಪುರುಷರಷ್ಟೇ ಸಮಾನತೆ ಮತ್ತು ಮೋಕ್ಷಾಧಿಕಾರಗಳುಂಟು. ಗುರುವಿನ ಮಹಿಮೆ, ಪ್ರಸಾದ, ಲಿಂಗಗಳಿಗೆ ಮಹತ್ವಪೂರ್ಣ ಸ್ಥಾನವಿದೆ. ಅಹಿಂಸಾತ್ಮಕ ಜೀವನದಲ್ಲಿ ಶ್ರದ್ಧೆ ಹೆಚ್ಚು. ಪುನರ್ಜನ್ಮದಲ್ಲಿ ನಂಬಿಕೆ ಇಲ್ಲ. ಸತ್ತವರ ಶವಗಳನ್ನು ಹೂಳುವರು. ಭಸ್ಮಧಾರಣೆಯಲ್ಲಿ ನಂಬಿಕೆ ಮುಂತಾದುವುಗಳಲ್ಲಿ ಅಚಲವಾದ ನಂಬಿಕೆಯಿದೆ. "ಕಾಯಕವೇ ಕೈಲಾಸ"ದ ಮಂತ್ರದಲ್ಲಿ ವಿಶ್ವಾಸವಿಟ್ಟ ಬಾಲಿ ನಿವಾಸಿಗಳು ಭೂಮಿಯನ್ನು ಉತ್ತು ಬಿತ್ತಿ ಬೆಳೆದು ಸುಖವಾಗಿದ್ದಾರೆ.

ಬಾಲಿ ದ್ವೀಪದ ಪೌರಾಣಿಕ ಕಥೆ

ಬಾಲಿ ದ್ವೀಪವು ಬಲಿ ಚಕ್ರವರ್ತಿಯ ಹೆಸರಿನಿಂದಾಗಿದೆ ಎನ್ನುವ ಪ್ರತೀತಿ ಇದೆ. ಪುರಾಣಗಳಲ್ಲಿರುವ ಮಾತೆ ವಾಮನ ಮತ್ತು ಬಲಿ ಇವರುಗಳ ಕಥೆಯಲ್ಲಿ ಬಲಿಯು ಪಾತಾಳ ಲೋಕದ ರಾಜನಾಗಿದ್ದನೆಂದು ತಿಳಿದು ಬರುತ್ತದೆ. ಇಂದಿನ ಬಾಲಿ ದ್ವೀಪವೇ ಅಂದಿನ ಪಾತಾಳ ಲೋಕವಾಗಿತ್ತೆಂದು ನಂಬಿಕೆ. ಈ ಭೂಭಾಗವು ಮೊದಲು ನೀರಿನಿಂದ ಆವೃತವಾಗಿರದೆ ಭಾರತಕ್ಕೇ ಸೇರಿತ್ತೆಂದೂ, ಕ್ರಮೇಣ ಪ್ರಕೃತಿಯ ವಿಕೋಪಕ್ಕೆ ಗುರಿಯಾಗಿ ಇದರ ಸುತ್ತಲೂ ನೀರು ಆವರಿಸಿ ದ್ವೀಪವಾಯಿತೆಂದೂ ಕೆಲವು ವಿದ್ವಾಂಸರ ಅಭಿಪ್ರಾಯವಿದೆ. ಒಂದು ವೇಳೆ ಈ ಅಭಿಪ್ರಾಯ ನಿಜವಾದಲ್ಲಿ ಈ ಭೂ ಭಾಗವು ವಾಮನ, ಬಲಿಗಳ ಅವತಾರ ಸ್ಥಳಗಳಾಗಿ ಶೈವರ ಮತ್ತು ಹಿಂದೂಗಳ ಪವಿತ್ರ ತೀರ್ಥಸ್ಥಾನ ವಾಗುವುದರಲ್ಲಿ ಸಂದೇಹವಿಲ್ಲ.

ಐತಿಹಾಸಿಕತೆ

ಬಾಲಿ ದ್ವೀಪಕ್ಕೆ ಶೈವರು ಯಾವಾಗ ಪ್ರವೇಶಿಸಿದರು ಎಂಬುದು ಸ್ಪಷ್ಟವಾಗಿ ಹೇಳುವುದು ಕಷ್ಟವಾಗಿದೆ. "ಲಿಯಾಂಗ್" ವಂಶದ ಚೀನೀ ಇತಿಹಾಸಕಾರನು ಕ್ರಿ. ಶ. 502 ರಲ್ಲಿ ಹೇಳಿರುವಂತೆ- ಬಾಲಿ ದ್ವೀಪದ ರಾಜ ಭಾರತದ ಕೌಂಡಿನ್ಯ ವಂಶದವನೆಂದು ಹೇಳಿಕೊಂಡಿದ್ದಾನೆಂದು ತಿಳಿಯುತ್ತದೆ. ಚೀನಾ ದೇಶದ ಯಾತ್ರಿಕ

ನಾದ ಹ್ಯೂಎನ್‌ತ್ಸಾಂಗ್‌ನು ಆ ದ್ವೀಪದ ಸಂಸ್ಕೃತಿಯ ಮೂಲವಾದವನ್ನು ಹೀಗೆಂದು ಹೇಳುತ್ತಾನೆ. — "ಮೂಲ ಸರ್ವಾಸ್ತಿವಾದನಿಕಾಯ" ಎಂದು ಒಪ್ಪಿರುವರೆಂದು ಹೇಳುತ್ತಾನೆ.

### ಬಾಲಿ ದ್ವೀಪದ ಭಾಷೆ

ಬಾಲಿ ದ್ವೀಪದ ಜನರು ಸಂಸ್ಕೃತವನ್ನು ಚೆನ್ನಾಗಿ ಬಲ್ಲವರಾಗಿದ್ದಾರೆ. ಇವರ ಪುರೋಹಿತರಿಗೆ "ಪಾದಂಡ" ರೆನ್ನುತ್ತಾರೆ. ಅಲ್ಲಿಯ ಇತರೆ ಜನರಿಗಿಂತ ಪಾದಂಡರು ಸಂಸ್ಕೃತವನ್ನು ಚೆನ್ನಾಗಿ ಆಡುತ್ತಾರೆ. ಇಲ್ಲಿಯ ಸಾಮಾನ್ಯ ಭಾಷೆ ಮಲಾಯೀ ಭಾಷೆಯಾಗಿದ್ದರೂ ಆದರಲ್ಲಿ ಸಂಸ್ಕೃತದ ಶಬ್ದಗಳು ಹೇರಳ.

ಇಲ್ಲಿನ ಜನತೆಯಲ್ಲಿ ಭಾರತದ ರಾಮಾಯಣ, ಮಹಾ ಭಾರತದ ಪ್ರಭಾವವೂ ಕಡಿಮೆಯಿಲ್ಲ. ಆದರೆ ಈ ಪ್ರಭಾವ ಬಾಲಿ ದ್ವಿಪಕ್ಕಿಂತ ಜಾವಾ, ಸುಮಾತ್ರಗಳಲ್ಲಿ ಅಧಿಕವಾಗಿದೆ. ಇಲ್ಲಿಯೂ ಕೆಲವು ಜನರಲ್ಲಿ ಭಾರತದ ಚಾತುರ್ವರ್ಣ ನೀತಿಯಲ್ಲಿಯೂ ನಂಬಿಕೆ ಇದೆ. ಇಂದಿನ ಆಧುನಿಕ ನಾಗರಿಕತೆಗೆ ಈ ನೀತಿ ಸಿಕ್ಕಿಕೊಂಡು ಕ್ರಮೇಣ ನಶಿಸುತ್ತಿದೆ.

ಇಲ್ಲಿನ ವಿವಾಹ ಪದ್ಧತಿ ಭಾರತದ ಶೈವ ಪದ್ಧತಿಗಿಂತ ಭಿನ್ನವಾಗಿದೆ ಇಲ್ಲಿನ ವಿವಾಹಗಳು ಸ್ವಯಂವರ ಪದ್ಧತಿಯಲ್ಲಿ ನಡೆಯುತ್ತವೆ ಹೀಗೆ ಬಾಲಿ ದ್ವೀಪವು ಭಾರತೀಯ ಶೈವ ಸಂಸ್ಕೃತಿಯ ಅವಿಭಾಜ್ಯ ಅಂಗವೆನಿಸಿಕೊಂಡು ಸ್ವಾವಲಂಬಿ ಜೀವನವನ್ನು ನಡೆಸುತ್ತಿದೆ







# ಗೂಳೂರ ಗಣಪತಿ

—ಮೃತ್ಯುಂಜಯ.
ಪೋಸ್ಟ್ ಮಾಸ್ಟರ್ ಸಿದ್ದಗಂಗ ಮಠ, ತುಮಕೂರು ಜಿಲ್ಲೆ.



ಕರ್ನಾಟಕದಲ್ಲೆಲ್ಲಾ ಇತಿಹಾಸ ಪ್ರಸಿದ್ಧವಾದ ತುಮಕೂರು ಜಿಲ್ಲೆಯ ಗೂಳೂರು ಮಹಾಗಣಪತಿಯ ವೈಶಿಷ್ಟ್ಯ ಹೇಳತೀರದು ಗೂಳೂರಿನಲ್ಲಿ ಗಣಪತಿಯನ್ನು ಇಡುವ ಪದ್ಧತಿ ಎಂದಿನಿಂದ ಪ್ರಾರಂಭವಾಯಿತೆಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲವಾದರೂ ಅನೇಕ ಶತಮಾನಗಳಿಂದಲೂ ಇಡುತ್ತಾ ಬಂದಿರುವುದು ಸರ್ವ ವಿದಿತ.

ಸ್ಥಳದ ಹಿರಿಯರಿಂದ ಕೇಳಿ ತಿಳಿದುಕೊಂಡ ಪ್ರಕಾರ, ಭೃಗುಮಹರ್ಷಿಗಳು ದೇಶ ಸಂಚಾರ ಮಾಡುತ್ತಾ ಗೂಳೂರು ಮಹಾ ನಗರದಲ್ಲಿ ತಂಗಿ ಒಂದು ಯಜ್ಞ ಮಾಡಿ ಮೊದಲು ಗಣಪತಿಯನ್ನು ಪೂಜಿಸಿ, ಮೂರು ತಿಂಗಳ ಕಾಲ ಯಾಗವನ್ನು ಪೂರೈಸಿದರು. ತರುವಾಯ ಅವರ ಅಪ್ಪಣೆಯಂತೆ ಪ್ರತಿ ವರ್ಷವೂ ಮೂರು ತಿಂಗಳ ಕಾಲ ಗಣಪತಿಯನ್ನು ಪೂಜೆ ಮಾಡುತ್ತಾ ಬಂದರೆಂದು ಪ್ರತೀತಿ.

ಭಾದ್ರಪದ ಚೌತಿಯ ದಿನ ಊರಿನ ಸಮಸ್ತ ಜನರೂ ಕೆರೆಗೆ ಹೋಗಿ ಜೇಡಿ ಮಣ್ಣು ತಂದು ಒಂದು ಚಿಕ್ಕ ಗಣಪತಿಯನ್ನು ಪ್ರತಿಷ್ಠಾಪಿಸಿ ಅಂದಿನಿಂದ ಪೂಜೆ ಮಾಡಲು ಪ್ರಾರಂಭಿಸುತ್ತಾರೆ. ಒಂದು ತಿಂಗಳ ಕಾಲ ಭಯ, ಭಕ್ತಿಗಳಿಂದ ಸ್ವಾಮಿಯ ಬೃಹತ್ ಮೂರ್ತಿಯನ್ನು ಸೃಷ್ಟಿಸಲು ನಾಲ್ಕು ಗಾಡಿಯಷ್ಟು ಜೇಡಿ ಒಂದು ಗಾಡಿ ಮರಳು ಬೇಕಾಗುತ್ತದೆ

ವಿಜಯದಶಮಿ ದಿನದಂದು ಬಣ್ಣವಿಲ್ಲದ ಗಣಪತಿ ಆಕೃತಿಯ ಹೊಟ್ಟೆಯಲ್ಲಿ ಸಣ್ಣ ಗಣಪತಿಯನ್ನು ಇಟ್ಟು ಪೂಜೆ ಪ್ರಾರಂಭವಾಗುತ್ತದೆ. ವಿಜಯದಶಮಿಯಿಂದ

ದೀಪಾವಳಿವರೆಗೂ ಅಂದರೆ ಮತ್ತೆ ಒಂದು ತಿಂಗಳು ಅಲಂಕಾರ ಹಾಗೂ ಬಣ್ಣಗಳನ್ನು ಹಾಕಲು ಹಿಡಿಯುತ್ತದೆ. ಅಂದಿನಿಂದ ಮತ್ತೆ ಒಂದು ತಿಂಗಳು ಮಹಾ ಪೂಜೆಗಳು ಅಭಿಷೇಕಗಳು ವಿಜೃಂಭಣೆಯಿಂದ ನಡೆಯುತ್ತವೆ.

ವಿಗ್ರಹ ಮಾಡುವ ಶಿಲ್ಪಿಯ ಅಭಿಪ್ರಾಯ ಬಹಳ ಚೆನ್ನಾಗಿದೆ. ಪ್ರತಿ ವರ್ಷವೂ ಹತ್ತಾರು ಕಡೆ ಗಣಪತಿ ಮೂರ್ತಿ ಮಾಡಿದರೂ ಗೂಳೂರು ಗಣಪತಿಯ ಅಲಂಕಾರ, ಹಾವಭಾವ, ಮನಮೋಹಕ ಆಕೃತಿ, ದೇವನು ಪ್ರತ್ಯಕ್ಷನಾಗಿ ಬಂದು ಕುಳಿತಿರುವಂತೆ ಅನಿಸುತ್ತದೆ ಎನ್ನುತ್ತಾರೆ. ಮುಂದುವರಿಯುತ್ತಾ ಅವರು ಹೇಳುತ್ತಾರೆ. ಬೇರೆಡೆ ಗಣಪತಿ ವಿಗ್ರಹವನ್ನು ನಾನು ಮಾಡಿದರೆ ಇಲ್ಲಿ ಗಣಪತಿಯು ತನ್ನ ಆಕೃತಿಯನ್ನು ತಾನೇ ಸೃಷ್ಟಿಸಿಕೊಳ್ಳುತ್ತಾನೆ. ಎನ್ನುತ್ತಾರೆ. ಅನೇಕ ಶತಮಾನಗಳಿಂದಲೂ ಒಂದೇ ರೀತಿಯ ಆಕೃತಿ, ನಿರ್ದಿಷ್ಟ ಅಳತೆಯೊಡನೆ ಮಾಡುತ್ತಾರೆ ಐವತ್ತು ವರ್ಷಗಳ ಹಿಂದೆ ಮೂರ್ತಿ ಮಾಡಿ ಸಾದು (ಕಪ್ಪು) ಬಣ್ಣ ಮೂರ್ತಿಗೆ ಬಳಸುತ್ತಿದ್ದರಂತೆ. ಒಂದೇ ರೀತಿಯ ಪೂಜಾ ವಿಧಾನ ಪದ್ಧತಿ ಅಂದಿನಿಂದ ಇಂದಿನವರೆಗೂ ಶಾಸ್ತ್ರೋಕ್ತವಾಗಿ ನಡೆಯುವುದನ್ನು ನೋಡಲು ಆಶ್ಚರ್ಯವಾಗುತ್ತದೆ.

ಮೂರ್ತಿಗೆ ಮಾಡಿರುವ ಹಾವು-ಹಾರ ಬಹಳ ಮೆಚ್ಚಬೇಕು. ಸುಮಾರು ಐದು ಸಾವಿರ ಮಣ್ಣಿನ ಮೊಗ್ಗಿನಿಂದ ಮಾಡಿ ಅಲಂಕರಿಸಿರುವ ಹಾರ ನಿಜವಾದ ಮಲ್ಲಿಗೆ ಮೊಗ್ಗಿನಿಂದ ಕಟ್ಟಿದ ಹಾರವೆಂಬಂತೆ ತೋರುತ್ತದೆ. ಪ್ರತಿದಿನ ರಾತ್ರಿಯ ಮಹಾ ಪೂಜೆಯನ್ನು ಭಕ್ತಾದಿಗಳು ಒಂದೊಂದು ದಿನ ಹಂಚಿಕೊಂಡು ನೆರವೇರಿಸುತ್ತಾರೆ. ಒಂದು ದಿನದ ಪೂಜೆಗೆ ಕನಿಷ್ಟ ಮುನ್ನೂರು ರೂ. ಮೇಲ್ಪಟ್ಟು ಖರ್ಚಾಗುತ್ತದೆ.

ಶ್ರೀ ಗಣಪತಿ ಆಕೃತಿಯ ಜೊತೆಗೆ ಮೊದಲಿನಿಂದಲೂ ಭೃಗುಮಹರ್ಷಿಗಳ ನೆನಪಿಗೆ ಅವರ ಆಕೃತಿಯನ್ನು ಮಾಡಿ ಅವರಿಗೂ ಪೂಜೆ ಸಲ್ಲಿಸುತ್ತಿದ್ದರು. ಗಣಪತಿ ವಿಸರ್ಜನೆಯ ಸಮಯದಲ್ಲಿ ಚಿಕ್ಕ ರಥದಲ್ಲಿ ಕೊಂಡೊಯ್ದು ಅದನ್ನು ನೀರಿಗೆ ಬಿಡುತ್ತಿದ್ದರು. ಜನರ ಬಾಯಲ್ಲಿ ಭೃಗುಮಹರ್ಷಿ, ಭೃಂಗಪ್ಪನೆಂದೂ ತರುವಾಯ ಬಿಂಗಪ್ಪನೆಂದು ರೂಢಿಯಲ್ಲಿ ಬಂದಿತು. ಈಗ ಬಿಂಗಪ್ಪನನ್ನು ಇಡುವ ಪದ್ಧತಿ ನಿಂತಿದೆ. ಕಾರಣ ತಿಳಿಯದು.

ಮೂರು ತಿಂಗಳ ಕಾಲ ಸಾವಿರಾರು ಕಾಯಿ, ಹಣ್ಣುಗಳಿಂದ ಪೂಜಿಸಲ್ಪಡುವ ಗೂಳೂರು ಗಣಪತಿಯನ್ನು ನೋಡಲು ನಾಡಿನ ಮೂಲೆ ಮೂಲೆಗಳಿಂದ ತಂಡೋಪತಂಡವಾಗಿ ಸ್ವಾಮಿಯ ದರ್ಶನಾಶೀರ್ವಾದ ಪಡೆದು ಹೋಗುತ್ತಾರೆ. ಹಿಂದಿನ



ಮಹಾರಾಜ ಶ್ರೀ ಜಯಚಾಮರಾಜ ಒಡೆಯರು ಸಹ ಬಂದು ದರ್ಶನ ಪಡೆದಿರುತ್ತಾರೆ. ನಾಡಿನ ಮೂಲೆ ಮೂಲೆಗಳಲ್ಲಿ ವಿಜೃಂಭಿಸುವ ಗಣಪತಿಯ ಹಿರಿಮೆಗಿಂತಲೂ ಗೂಳೂರಿನಲ್ಲಿ ನೆಲಸಿದ ಗಣಪತಿಯ ಆಕರ್ಷಣೆ ವಿಭಿನ್ನ ರೀತಿಯದು. ಹೆಚ್ಚಿನ ಆಡಂಬರವಿಲ್ಲದ ಒಂದೇ ರೀತಿಯ ಪದ್ಧತಿಯು ಮೆಚ್ಚತಕ್ಕದ್ದು.

ಗಣಪತಿಯನ್ನು ವಿಸರ್ಜಿಸುವ ಹಿಂದಿನ ರಾತ್ರಿ ರಥದ ಮೇಲೆ ಕೂಡಿಸಿ ಊರಿನ ಮುಖ್ಯ ಬೀದಿಗಳಲ್ಲಿ ವಿಜೃಂಭಣೆಯಿಂದ ಮೆರವಣಿಗೆ ಯಾಗುತ್ತದೆ. ವಿದ್ಯುದ್ದೀಪ ಅರೆ, ತಮಟೆ, ನಾಗಸ್ವರ, ಡೋಲು, ಕರಡಿವಾದ್ಯ ನಂದೀಧ್ವಜ, ಕೀಲು ಕುದುರೆ. ಮದ್ದು ಗುಂಡುಗಳ ಅರ್ಭಟ ಸುತ್ತಲಿನ ಐದಾರು ಮೈಲಿ ಗ್ರಾಮಗಳಿಗೆ ಚೈತನ್ಯ ನೀಡುತ್ತದೆ. ದೇವಸ್ಥಾನದಿಂದ ಸ್ವಾಮಿಯನ್ನು ಹಾರೆಗಳ ಮುಖೇನ ಹೆಚ್ಚಿನ ಅನುಭವಿ ಕುಲಕರ್ಮಿಗಳು ಭಿನ್ನವಾಗದಂತೆ ಹೊರಗೆ ತರುತ್ತಾರೆ ಹೂವಿನ ಅಲಂಕಾರಗಳಿಂದ ಕೂಡಿದ ಮೆರವಣಿಗೆಯ ವೈಶಿಷ್ಟ್ಯ ವರ್ಣಿಸಲಸದಳ.

ಮಾರನೆ ದಿವಸ ಸಾಯಂಕಾಲ ಸಾವಿರಾರು ಭಕ್ತಾದಿಗಳ ಸಮ್ಮುಖದಲ್ಲಿ ರಥದೊಡನೆ ಶ್ರೀ ಸ್ವಾಮಿಯವರನ್ನು ಕೆರೆಯ ಮಧ್ಯಕ್ಕೆ ತೆಗೆದು ಕೊಂಡು ಹೋಗಿ ವಿಸರ್ಜಿಸುವುದನ್ನು ನೋಡಿದರೆ ಎಂತಹವರಿಗೂ ಕಣ್ಣೀರು ಬರುತ್ತದೆ. ಮೂರು ತಿಂಗಳ ಕಾಲ ವಿಜೃಂಭಿಸುತ್ತಿದ್ದ ಗೂಳೂರಿನ ಹಿರಿಮೆಯನ್ನು ಕಳೆದು ಬರಿಗೈಯಲ್ಲಿ ಹಿಂದಿರುಗಬೇಕಾಯಿತಲ್ಲಾ ಎಂದು ಒಂದೇ ರೀತಿಯ ಮನೋವೇದನೆ ಮುಸುಕುತ್ತದೆ. ರಥವು ಹಿಂತಿರುಗಿ ಬರುವಾಗ ಶ್ರೀ ಸ್ವಾಮಿಯವರ ಕಿರೀಟವನ್ನು ಹಿಂದಕ್ಕೆ ತರುತ್ತಾರೆ. ಹಿಂದಿರುವಾಗ ರಥಕ್ಕೆ ನೂರಾರು ಕಾಯಿಗಳನ್ನು ಹೊಡೆಯುತ್ತಾರೆ.

ಹಿಂದಿನಿಂದಲೂ ಊರಿನ ಗ್ರಾಮಸ್ಥರು ಏಕ ರೀತಿಯ ಭಕ್ತಿ, ಭಾವನೆಗಳಿಂದ ಒಗ್ಗಟ್ಟನಿಂದ ಸ್ವಾಮಿಯ ಕಾರ್ಯಗಳನ್ನು ಶ್ರದ್ಧೆವಹಿಸಿ ಮಾಡುತ್ತಿರುವುದನ್ನು ನೋಡಿದರೆ ಆನಂದವಾಗುತ್ತದೆ. ಹದಿನೆಂಟು ಕೋಮಿನವರು ಒಂದೊಂದು ಸೇವೆಯನ್ನು ಮಾಡಲು ಬಂದ ಪದ್ಧತಿಯು ಈಗಲೂ ನಡೆಯುತ್ತದೆ. ಭಕ್ತಾದಿಗಳು, ಗ್ರಾಮಸ್ಥರು ಇನ್ನೂ ಉತ್ಸಾಹ ಆಸಕ್ತಿ ವಹಿಸಿ ಇತಿಹಾಸ ಪ್ರಸಿದ್ಧಿಯಾದ ಗಣಪತಿಯ ದೇವಸ್ಥಾನಕ್ಕೆ ಗೋಪುರ ಕಟ್ಟಿಸಿ ಒಂದು ಬೃಹತ್ ನೆಲೆ ಮೂರ್ತಿಯನ್ನು ಸ್ಥಾಪಿಸಿ ಆಗಾಗ್ಗೆ ಬರುವ ಯಾತ್ರಿಕರಿಗೆ ಸ್ವಾಮಿಯ ದರ್ಶನಾಶೀರ್ವಾದ ಕಲ್ಪಿಸುವ ಭಾಗ್ಯ ಗ್ರಾಮಸ್ಥರು ಹಾಗೂ ಭಕ್ತಾದಿಗಳ ಗುರುತರ ಕರ್ತವ್ಯವಾಗಿದೆ. ಈ ದಿಶೆಯಲ್ಲಿ ಸರ್ವರೂ ಆಲೋಚಿಸಿ ಕಾರ್ಯೋನ್ಮುಖರಾಗಲು ಮಹಾಗಣಪತಿಯು ಆಶೀರ್ವದಿಸಲಿ

ಗೂಳೂರು ಗಣಪತಿ ದರ್ಶನ ಪಡೆದ ಭಕ್ತಾದಿಗಳೆಲ್ಲರೂ ಗೂಳೂರಿಗೆ 1 ಕಿ. ಮೀ. ದೂರವಿರುವ ಕೈದಾಳಕ್ಕೆ ಹೋಗಿ ಶ್ರೀ ಚನ್ನಕೇಶವಸ್ವಾಮಿಯವರ ದರ್ಶನ ಪಡೆದು

ಹಿಂದಿರುಗುತ್ತಾರೆ. ಬೇಲೂರಿನಲ್ಲಿ ಡಂಕಣಾಚಾರಿ ಹೂಡಿದ ಪಣದಲ್ಲಿ ಸೋತ ತಂದೆ ಜಕಣಾಚಾರಿ ಕೈ ಕಳೆದುಕೊಂಡು ಇಲ್ಲಿನ ಚನ್ನಕೇಶವಸ್ವಾಮಿ ವಿಗ್ರಹವನ್ನು ಮೊಂಡ ಕೈನಲ್ಲೇ ಸೃಷ್ಟಿಸಿ ದೈವಕೃಪೆಗೆ ಪಾತ್ರನಾಗಿ ಮತ್ತೆ ಕೈ ಪಡೆದ ಸ್ಥಳ ಕೈದಾಳ. ಕೈದಾಳದ ಚನ್ನಕೇಶವಸ್ವಾಮಿ ದೇವಸ್ಥಾನದ ಪಕ್ಕದಲ್ಲಿ ಈಶ್ವರ ದೇವಸ್ಥಾನದಲ್ಲಿರುವ ಶಿಲಾಶಾಸನದ ಪ್ರಕಾರ (ಎ. ಶ್ರೀಕಂಠಯ್ಯನವರು ಓದಿ ತಿಳಿಸಿದ್ದಾರೆ.) ಹದಿನೈದನೇ ಶತಮಾನದ (ಕ್ರಿ. ಶ. 1493) ರಲ್ಲಿ ಗೂಳೂರು ಮಹಾ ನಗರವೆಂದೂ ಸಾಮಂತ ಬಾಚಿ ಎಂಬ ರಾಜ ಆಳ್ವಿಕೆ ಇತ್ತೆಂದೂ ತುಮಕೂರು, ಕಿತ್ತಗಾನಹಳ್ಳಿ, ಮಾನಂಗಿ ಮೂಲದ ಆಂಜನೇಯಸ್ವಾಮಿದೇವಸ್ಥಾನ ಮತ್ತು ಹೆತ್ತೇನಹಳ್ಳಿವರೆಗೆ ಆ ನಗರದ ಎಲ್ಲೆ ಅವರಿಸಿತ್ತೆಂದೂ ಈಗ ಹಾಲಿ ಇರುವ ನಡುವಲ ಮಠ ಮಧ್ಯಪಟ್ಟಣವೆಂದೂ ತಿಳಿದು ಬರುತ್ತದೆ. ಒಂದೂನೂರ ಒಂದು ದೇವಸ್ಥಾನಗಳಿಂದ ಮೆರೆದ ಈ ನಗರ ಕಾಲ ಕ್ರಮೇಣ ಶಿಥಿಲವಾದರೂ ಅದರ ಭಗ್ನಾವಶೇಷಗಳು ಈಗಲೂ ತಮ್ಮ ಕಥೆಗಳನ್ನು ಸಾರಿ ಹೇಳುತ್ತವೆ. ತಮ್ಮ ತಮ್ಮ ಜೀವನ ಕಥೆಗಳನ್ನು ಹೇಳಲು ಅನೇಕ ಸಂಶೋಧಕರನ್ನು ಬಾ ಎಂದು ಕೈಬೀಸಿ ಕರೆಯುತ್ತಿವೆ. ಈ ದೇವಾಲಯಗಳು.

ನನ್ನ ಶೋಧನೆಯಿಂದ ಇದುವರೆಗೆ 43 ದೇಗಸ್ಥಾನಗಳಿರುವುದು ತಿಳಿದು ಬಂದಿದೆ ಕೊನೆಯದಾಗಿ ಈ ಲೇಖನ ಬರೆಯಲು ಸ್ಪೂರ್ತಿ ನೀಡಿದ ಮಹಾಗಣಪತಿಗೆ ನಮಸ್ಕರಿಸುತ್ತೇನೆ.

---

ಹರನೇ ನೀನೆಗೆ ಗಂಡನಾಗಬೇಕೆಂದು ಅನಂತ ಕಾಲ ತಪಿಸಿದ್ದೆ ನೋಡಾ. ಹಸೆಯು ಮೇಲಣ ಮಾತ ಬಿಸಗೊಳಲಟ್ಟಿದರೆ, ಶಶಿಧರನ ಹತ್ತಿರಕ್ಕೆ ಕಳುಹಿದ ರೆಮ್ಮವರು. ಭಸ್ಮವನೆ ಹೂಸಿ, ಕಂಕಣವನೇ ಕಟ್ಟಿದರು, ಚನ್ನಮಲ್ಲಿಕಾರ್ಜುನಯ್ಯಾ, ನನಗೆ ನೀನಾಗಬೇಕೆಂದು.

‡ ‡ ‡ ‡

ಹಚ್ಚಿಯ ನೆಲಗಟ್ಟು, ಕನಕದ ತೋರಣ, ವಜ್ರದ ಕಂಭ, ಪವಳದ ಚಪ್ಪರ ವನಿಕ್ಕಿ ಮುತ್ತು ಮಾಣಿಕ್ಯದ ಮೇಲುಕಟ್ಟು ಕಟ್ಟಿ, ಮದುವೆಯ ಮಾಡಿದರು, ನೆಮ್ಮವರೆನ್ನ ಮದುವೆಯ ಮಾಡಿದರು. ಕಂಕಣ ಕೈದಾರ ಸ್ಥಿರ ಸೇಸೆಯನಿಕ್ಕಿ, ಚನ್ನಮಲ್ಲಿಕಾರ್ಜುನನೆಂಬ ಗಂಡಗೆನ್ನ ಮದುವೆಯ ಮಾಡಿದರು.

—ಅಕ್ಕಮಹಾದೇವಿ

---



# ಹಿರಿಬಾಳಿನ ಮೇಳ– ಗ್ರಂಥಾಲಯಗಳು

—ವಿ. ಬಿ. ಹೊಸಮನೆ

ಸಂಪಾದಕ 'ಕಲಾದರ್ಶನ' ಮಂಗಳೂರು

ಎನಿತು ಹಿರಿಬಾಳುಗಳ ಮೇಳ ನೆರೆದಿಹುದಿಲ್ಲಿ
ಈ ಗ್ರಂಥಗಳೋ, ಅಂಥ ಬಾಳುಗಳ ಏಳಿಯುಳಿಕೆ,
ಇದಕಂಡು ಮೂಲವನು ಚಿತ್ರಿಸಲು ಯತ್ನಿಸುವೆ,
ಕಡೆಗೆ ನಿಲ್ಲುವೆ ವಿಶ್ವರೂಪಾವಲೋಕನದಿ
ಪಾರ್ಥನೊಲು ತತ್ತರಿಸಿ ಭೀತವಿಸ್ಮಿತನಾಗಿ"

ಕವಿ ಸಿ. ಪಿ. ಕೆ. ಅವರ ವಾಣಿಯಂತೆ ಈ ಹಿರಿಬಾಳುಗಳ ಮೇಳದಲ್ಲಿ ಒಮ್ಮೆ ಬೆರೆತುಕೊಳ್ಳುವುದೇ ತಡ, ಮತ್ತೆ ಈ ಮೇಳವನ್ನು ಬಿಟ್ಟಿರಲು ಮನವೊಪ್ಪುವುದಿಲ್ಲ. ಆದರೆ ಈ ಮೇಳದಲ್ಲಿ ಬೆರೆದುಕೊಳ್ಳುವ ಮಂದಿ ಎಷ್ಟು?

ಮನುಷ್ಯನಿಗೆ ದೈಹಿಕ ಆರೋಗ್ಯ – ಮಾನಸಿಕ ಆರೋಗ್ಯಗಳೆರಡೂ ಅತಿ ಮುಖ್ಯ. ವ್ಯಾಯಾಮದಿಂದ ದೇಹಾರೋಗ್ಯವನ್ನು ಕಾಪಾಡಬಹುದು. ಸ್ನಾನ ದಿಂದ ದೇಹ ಮಾಲಿನ್ಯವನ್ನು ನೀಗಲೂಬಹುದು. ಮಾನಸಿಕ ಆರೋಗ್ಯಕ್ಕೂ ಮಾನಸಿಕ ಆರೋಗ್ಯಕ್ಕೂ ಮಾನಸಿಕ ಕಾಳಿಕೆಗಳನ್ನು ಕಳೆಯುವುದಕ್ಕೂ ಜ್ಞಾನ-ಧ್ಯಾನಗ ಳನ್ನೆ ಅನುಸರಿಸಬೇಕಾಗುತ್ತದೆ. ಧ್ಯಾನ ಮಾರ್ಗದಿಂದ ಮಾನಸಿಕ ಮಾಲಿನ್ಯವನ್ನು ತೊಳೆದುಕೊಳ್ಳುವ ಮಂದಿ ಸಾಧುಸಂತರು-ಅವಧೂತ ಮಾರ್ಗಗಾಮಿಗಳು. ಇಂತಹ ಯೋಗಿಗಳು ಲಕ್ಷಕ್ಕೊಬ್ಬನಾದರೂ ದುರ್ಲಭ. ಜನಸಾಮಾನ್ಯರಿಗೆ-ವಿದ್ಯಾವಂತರಿಗೆ ಈ ವಿಚಾರ ಗುರುಗಳ ಮುಖದಿಂದ ಮೊದಲು ದೊರಕುತ್ತದೆ. ಆ ಮೇಲೆ ಅದನ್ನು ಬೆಳೆಸಿಕೊಳ್ಳಬೇಕಾದರೆ ಅವರು ಇಂದಿನ ಪರಿಸ್ಥಿತಿಗನುಸರಿಸಿ ಗ್ರಂಥಭಂಡಾರಗಳನ್ನೆ ಶರಣು ಹೋಗಬೇಕಷ್ಟೆ. ಕವಿ ವಾಣಿಯಂತೆ ಎಲ್ಲಿಯೂ ದೊರಕದ ಹಿರಿಬಾಳುಗಳ ಮೇಳ ಗ್ರಂಥಭಂಡಾರದಲ್ಲಿ ಒಂದೆಡೆ ಸೇರಿರುತ್ತದೆ. ಜ್ಞಾನ-ವಿಜ್ಞಾನಗಳ ಸಾಹಿತ್ಯ ಗಳು ಅಲ್ಲಿರುತ್ತವೆ. ಈ ವಿಧದ ಆಕರ್ಷಣೆಯಿಂದ ಗ್ರಂಥಾಲಯಗಳು ಮಾನವನನ್ನು ದೇವತ್ವದೆಡೆಗೆ ಒಯ್ಯುವ ಕೇಂದ್ರಗಳು ಜ್ಞಾನದಾನ ಮಾಡುವ ವಿಶ್ವವಿದ್ಯೆಗಳ ನಿಲ ಯವಾಗಿ, ಸಾರ್ವಜನಿಕ ಶಿಕ್ಷಣ ಕೇಂದ್ರವಾಗಿ ಬೆಳಗಬೇಕು.

ಪ್ರಜಾಪ್ರಭುತ್ವ ರಾಜ್ಯದಲ್ಲಿ ಗ್ರಂಥ ಭಂಡಾರಗಳ ಸೇವೆ ಮಹತ್ತರವಾದುದು. ಕರ್ನಾಟಕ ಸರ್ಕಾರವು ೧೯೬೫ ರಿಂದ ಗ್ರಂಥಾಲಯ ಶಾಸನವನ್ನು ವ್ಯವಹಾರದಲ್ಲಿ ತಂದಿದೆ. ಇವರ ಶಾಸನದಂತೆ ಪ್ರತಿಯೊಂದು ಜಿಲ್ಲೆಯ ಕೇಂದ್ರ ಗ್ರಂಥ ಲವಿದ್ದು ಇದರ ನಿರ್ದೇಶನದಂತೆ ಪ್ರತಿ ತಾಲ್ಲೂಕು ಹಾಗೂ ನಗರ-ಹಳ್ಳಿಗಳ ಕೇಂದ್ರ ಸ್ಥಳಗಳಲ್ಲೆಲ್ಲ ಇದರ ಶಾಖೆಗಳು ಜನರ ಜ್ಞಾನದಾಹವನ್ನು ತಣಿಸುವಲ್ಲಿ ಜನರ ಸದಭಿರುಚಿಗಳನ್ನು ಬೆಳೆಸುವುದರಲ್ಲಿ ಅದರ ಹೊಣೆ ದೊಡ್ಡದು.

## ನಗರ ಕೇಂದ್ರಗ್ರಂಥ ಲಯಗಳು :

ಒಳಿತು ಕೆಡಕುಗಳು ಜೊತೆ ಜೊತೆಯಾಗಿಯೇ ಬರುವುದು ಸಹಜ. ಜೀವನದ ಪ್ರತಿಯೊಂದು ರಂಗದಲ್ಲಿಯೂ ಈ ಅವಳಿ-ಜವಳಿಗಳ ಸ್ಪರ್ಧೆ ಇದ್ದೇ ಇರುತ್ತದೆ. ನಗರಕೇಂದ್ರಗಳಲ್ಲಿ ಗ್ರಂಥಭಂಡಾರಗಳ ಶಾಸನದಂತೆ ನಾಗರಿಕರಿಗೆ ಬೇಕಾದ ಜ್ಞಾನ ತೃಷೆಯನ್ನು ನೀಗಿಸುವ ಗ್ರಂಥಭಂಡಾರಗಳೂ ವಾಚನಾಲಯಗಳೂ ನಾಗರೀಕರಿಂದ ಎತ್ತುವ ತೆರಿಗೆಗೆ ಅನುಗುಣವಾಗಿ ಬೆಳೆಯುತ್ತಲೂ ಇವೆ. ಗ್ರಂಥಾಲಯದಲ್ಲಿ ಕರ್ಮಚಾರಿಗಳಾಗಿ ಬರತಕ್ಕವರು ಋಷಿ ಸಮಾನ ಜೀವನ ನಿರ್ವಾಹಕರಾಗಿರಬೇಕು. ಈ ಕೇಂದ್ರಗುರುಕುಲದಂತೆ ತೋರಬೇಕು. ಶಿಕ್ಷಣ ಸಂಸ್ಥೆಗಳಲ್ಲಿ ಗುರುಗಳು ಪಾಠ ಪ್ರವಚನಗಳಿಂದ ಶಿಷ್ಯರ ಜ್ಞಾನ ಸಂಪತ್ತನ್ನು ನೇರಾಗಿ ಹೆಚ್ಚಿಸುತ್ತಿದ್ದರೆ ಈ ಕೇಂದ್ರಗಳಲ್ಲಿ ಮೌನದಿಂದಿದ್ದು ಮಂತ್ರದುಷ್ಟಾರರಂತೆ ಜನರ ಜ್ಞಾನನಿಧಿಗೆಪೂರಕವಾದ ಸಾಹಿತ್ಯವನ್ನೊದಗಿಸುವವರಾಗಬೇಕು.

ಆದರೆ ಇಂದು ಈ ಪವಿತ್ರಕ್ಷೇತ್ರದಲ್ಲಿಯೂ ರಾಜಕೀಯ ಕೈಯಾಡಿಸುವುದರಿಂದ ಮಲಿನತೆ ತಲೆದೋರುತ್ತಿದೆ. ಪ್ರಾಚೀನ ಕಾಲದ ಗ್ರಂಥಭಂಡಾರಗಳೆಲ್ಲ ಆಧುನಿಕ ಕಾಲಕ್ಕೆ ಹೊಂದಿಕೊಳ್ಳುವಾಗ ಕೆಲವೊಂದು ಬಗೆಯಿಂದ ಪರಿವರ್ತನೆ ಸಹಜ. ಆದರೆ ಪರಂಪರೆಯನ್ನೆ ಬಿಟ್ಟು ದೂರಸರಿದರೆ ಅಲ್ಲೇನುಳಿಯಿತು ?

ನಗರ ಕೇಂದ್ರಗಳಲ್ಲಿ ವಾಚನಾಭಿರುಚಿಯ ಜನರು ಹೆಚ್ಚಾಗಿರುತ್ತಾರೆ. ಅವರ ವಾಚನಾಭಿರುಚಿಗೆ ತಕ್ಕಂತೆ ಪತ್ರಿಕೆಗಳನ್ನು ಗ್ರಂಥಸಾಹಿತ್ಯಗಳನ್ನು ಒದಗಿಸುವುದು ಅವಶ್ಯ. ಆದರೆ ಇಂತಹ ಸಂದರ್ಭದಲ್ಲಿ ಗ್ರಂಥಾಲಯದ ಅಧಿಕಾರಿಗಳ ದೃಷ್ಟಿ ಸಮಾಜದ ಒಳಿತಿನ ಕಡೆಗಿರಬೇಕಲ್ಲದೆ, ಕೀಳು ಅಭಿರುಚಿಯನ್ನು ಹೆಚ್ಚಿಸಿ ಸಮಾಜದ ಕೆಡುಕಿಗೆ ಕಾರಣವಾಗುವಂತಿರಬಾರದು, ಕೇವಲ ಜನಪ್ರಿಯತೆಗೆ ತವಕಪಡುವುದು ಉತ್ತಮ ಮಾರ್ಗವಲ್ಲ.



## ಜಿಲ್ಲಾ ಕೇಂದ್ರ ಗ್ರಂಥಾಲಯ ಮತ್ತು ಶಾಖೆಗಳು :

ಕರ್ನಾಟಕ ರಾಜ್ಯ ಗ್ರಂಥಾಲಯ ಶಾಸನದಂತೆ ಎಲ್ಲ ಜಿಲ್ಲೆಗಳಲ್ಲಿಯೂ ಒಂದೊಂದು ಕೇಂದ್ರ ಗ್ರಂಥಾಲಯವಿದೆ. ಅವುಗಳ ಶಾಖೆಗಳು ತಾಲ್ಲೂಕು ಕೇಂದ್ರಗಳಲ್ಲಿಯೂ ಮುಖ್ಯ ಗ್ರಾಮ ಕೇಂದ್ರಗಳಲ್ಲಿಯೂ ಇವೆ ಇವಲ್ಲದೆ ಗ್ರಾಮ ಪಂಚಾಯತಗಳು-ನಗರ ಪಂಚಾಯತಗಳು ತಮ್ಮ ತಮ್ಮ ಕೇಂದ್ರದಲ್ಲಿ ಗ್ರಂಥಾಲಗಳನ್ನು ನಡೆಸುತ್ತವೆ (ಕೆಲವಡೆಗಳಲ್ಲಿ ಅದರ ಲಾಭವನ್ನೆಲ್ಲ ನಿರ್ದಿಷ್ಟ ವ್ಯಕ್ತಿಗಳು ಮಾತ್ರ ಪಡೆದುಕೊಳ್ಳುತ್ತಿರುವುದು ಯಾವ ಪ್ರಜಾಪ್ರಭುತ್ವದ ಧೋರಣೆಯೊ ತಿಳಿಯದು.) ಇಷ್ಟೇ ಅಲ್ಲ; ಹಲವು ಕೇಂದ್ರಗಳನ್ನು ಆಯ್ಕೆ ಮಾಡಿ ಅಲ್ಲಿ ಗ್ರಂಥ ವಿತರಣ ಕೇಂದ್ರಗಳನ್ನು ನಡೆಸಿಕೊಂಡು ಬರುತ್ತವೆ ಜನ ಸಾಮಾನ್ಯರಲ್ಲಿ ಸಾಕ್ಷರತೆಯ ಕಡೆಗ ಒಲವು ತೋರಬೇಕಾದರೆ ಗ್ರಂಥಾಲಯಗಳ ಚಳವಳಿ ಮುಖ್ಯ ಎಂಬುದರಲ್ಲಿ ಸಂದೇಹವಿಲ್ಲ.

ಜನರಿಂದ ಗ್ರಂಥಾಲಯದ ತೆರಿಗೆ, ಶಿಕ್ಷಣ ತೆರಿಗೆ ಇತ್ಯಾದಿ ಸಂಗ್ರಹವಾದ ಮೊತ್ತ ನಮ್ಮ ರಾಜಕೀಯದ ಕೆಲವು ದುರುದ್ದೇಶಗಳು ವ್ಯರ್ಥಗೊಳಿಸುತ್ತವೆ ಎಂಬುದನ್ನು ನಮ್ಮ ಜನ ಇನ್ನು ಚೆನ್ನಾಗಿ ಅರ್ಥಮಾಡಿಕೊಂಡಿಲ್ಲ. ಶಿಕ್ಷಣವು ಒಂದು ಸಾಮಾಜಿಕ ಸೇವೆ ಎಂಬ ಭಾವನೆಯೂ ಮರೆತು ಹೋಗುತ್ತಿರುವಂತಹ ಕಾಲವಿಂದು ಬರುತ್ತಿದೆ ಗ್ರಂಥಭಂಡಾರಗಳ ಪಾಡು ಮತ್ತೆ ಹೇಗಾಗಬೇಕು ? ನಗರ ಸಭೆಗ ಗ್ರಾಮ ಪಂಚಾಯತಗಳೂ ಗ್ರಂಥಭಂಡಾರ ತೆರಿಗೆಗಳನ್ನು ಅದೇ ಉದ್ದೇಶಕ್ಕಾಗಿ ಬಳಸಿಕೊಂಡರೆ, ಈಗಿರುವ ಇಮ್ಮಡಿ ಸೇವೆಯನ್ನು ಈ ಗ್ರಂಥ ಭಂಡಾರಗಳು ಮಾಡಲು ಸಾಧ್ಯ. ಜನತ ಜ್ಞಾನ ತೃಷೆಗೆ ಬೇಕಾದ ಸಾಹಿತ್ಯಗಳನ್ನೊದಗಿಸಲು ಇಂತಹ ಕೇಂದ್ರಗಳುತ್ತಿನೆರವಾಗಲು ಸಾಧ್ಯ. ಆಲ್ಲಲ್ಲಿನ ಪರಿಸ್ಥಿತಿಗೆ ಹೊಂದುಕೊಂಡು ಚಲನಚಿತ್ರ ಮಾಧ್ಯಮದ ಮೂಲಕವೂ ಭಾಷಣ ನಾಟಕ-ಚಿತ್ರಕಲೆ ಇತ್ಯಾದಿಗಳ ಮೂಲಕವು ಜನರ ಮನಸ್ಸನ್ನು ಸಮತಳಡಲ್ಲಿ ನೆಲಸುವಂತೆ ಮಾಡಿ ಶಾಂತಿಯನ್ನು ಹೆಚ್ಚಿಸಬಹುದು.

ಪ್ರಜಾಪ್ರಭುತ್ವದ ಯಶಸ್ಸಿಗೆ ಜನರು ಜ್ಞಾನಸಂಪನ್ನರಾಗಿರುವಂತೆ ಮಾಡುವುದೇ ಮೊದಲನೆಯ ಕರ್ತವ್ಯ. ಇದನ್ನು ಸಾಧಿಸುವಲ್ಲಿ ನಮ್ಮ ಮುಂದಾಳುಗಳಲ್ಲಿ ಏಕೆ ಯಶಸ್ವಿಗಳಾಗುತ್ತಿಲ್ಲ ? ಎಲ್ಲೆಲ್ಲಿಯೂ ಅಶಾಂತಿ ತಲೆದೋರುತ್ತಿದೆ. ಪುಂಡಾಟಿಕೆಗಳು ಒಬ್ಬರನೊಬ್ಬರು ನಿಗ್ರಹಿಸಲು ಮುಂದಾಗುತ್ತಿವೆ. ಇವನ್ನು ಶಮನಗೊಳಿಸುವ ಭಾವಸಮನ್ವಯದ ಮಾರ್ಗವೆಂದರೆ, ಉತ್ತಮ ಭಾವನೆಯನ್ನು ಬೆಳೆಸುವ ಯತ್ನ. ಅದಕ್ಕೆ ಉತ್ತಮ ಧ್ಯೇಯದ ಪತ್ರಿಕೆಗಳೂ ಗ್ರಂಥ ಭಂಡಾರಗಳೂ ಪ್ರಯತ್ನ ಪಟ್ಟರೆ ಯಶಸ್ಸನ್ನುಗಳಿಸಲು ಸಾಧ್ಯ. ಹಿರಿಬಾಳುಗಳ ಮೇಳದಿಂದ ಸಾಧ್ಯ. ಮಾಲೆಯಾಗಲೆಂದು ಹಾರೈಕೆ.

(ಇದು ಗ್ರಂಥ ಭಂಡಾರದ ಚಳುವಳಿ ಲೇಖನ

# ಕರಟವನ್ನು ಕಡೆಗಣಿಸಬೇಡಿ

—ಪ. ರಾಮಕೃಷ್ಣ ಶಾಸ್ತ್ರಿ
"ಶಿವಶಕ್ತಿ ನಿಲಯ" ಅಂಚೆ: ಮಚ್ಚಿನ-574295 (ದ. ಕ.)

ತೆಂಗಿನ ಕಾಯಿಯ ಗೆರಟೆ ಅಥವಾ ಚಿಪ್ಪನ್ನು ಜನ ಸಾಮಾನ್ಯರು ಒಲೆ ಯುರಿಸಲು ಉಪಯೋಗಿಸುತ್ತಾರೆ. ಅದಕ್ಕೆರಡು ತೂತು ತೆಗೆದು, ಒಂದು ಬಿದಿರಿನ ಸಲಿಕೆ ಸಿಕ್ಕಿಸಿ ಅಡಿಗೆಗೆ ಸೌಟನಂತೆ ಬಳಸುತ್ತಾರೆ. ಇದನ್ನು ಬಿಟ್ಟರೆ ಗೆರಟೆ ನಿರುಪ ಯೋಗಿಯೆಂದೇ ಅನೇಕರ ಭಾವನೆ. ನಿರ್ಗತಿಕನಾದವನಿಗೆ 'ಕರಟ ಕೋಲೇ ಗತಿ' ಎಂದು ಹೇಳುವುದೂ ಉಂಟು.

ತೆಂಗಿನ ಮರವನ್ನು ಪೂರ್ವಿಕರು ಕಲ್ಪವೃಕ್ಷವೆಂದು ಕರೆದರು. ಅದರ ಕರಟ ಕಡೆಗಣಿಸುವ ವಸ್ತುವೇ ಅಲ್ಲ. 1889 ರಲ್ಲಿ ಡಾ. ವಾಚ್‌ರವರು ಬರೆದ ಒಂದು ಗ್ರಂಥದಲ್ಲಿ ದಿನ ಬಳಕೆಯ ಎಂಬತ್ತಮೂರು ಬಗೆಯ ವಸ್ತುಗಳನ್ನು ಗೆರಟೆಯಿಂದ ತಯಾರಿಸಬಹುದೆಂದು ಹೇಳಿದ್ದಾರೆ. ಭಾರತ ಹಾಗೂ ತೆಂಗಿನ ಬೆಳೆ ಪ್ರಧಾನವಾಗಿ ರುವ ಉಷ್ಣವಲಯದ ಕೆಲವು ದೇಶಗಳಲ್ಲಿ ಅನೇಕ ಶತಮಾನಗಳಿಂದ ಗೆರಟೆಯನ್ನು ದಿನಬಳಕೆಯ ವಸ್ತುಗಳಿಗಾಗಿ ಉಪಯೋಗಿಸಲಾಗುತ್ತಿದೆ.

ತಮಿಳುನಾಡಿನಲ್ಲಿ ಪುಷ್ಪದಾನಿಗಳು, ಚಮಚಗಳು, ದೀಪಸ್ತಂಭಗಳು ಮತ್ತಿ ತರ ಕೆತ್ತನೆಯ ಸಾಧನಗಳನ್ನೂ ಕಲಾಕೃತಿಗಳನ್ನು ಹುಕ್ಕದ ನಲಿಕೆಗಳನ್ನು ಗೆರಟೆ ಯಿಂದ ತಯಾರಿಸಿದ ತಂಬೂರಿಯನ್ನು ಕಾಣಬಹುದು.

ಔದ್ಯೋಗಿಕ ರಂಗದಲ್ಲಿ ಗೆರಟೆಯ ಉಪಯೋಗಗಳು ಹಲವು ಬಗೆ. ಉಕ್ಕು ಮತ್ತು ಕಬ್ಬಿಣದ ಕಾರ್ಖಾನೆಗಳಲ್ಲಿ ಕಟ್ಟಿಗೆಯನ್ನು ಗಾಳಿ ಪ್ರವೇಶಿಸದಿರುವ ಪಾತ್ರೆ ಯಲ್ಲಿ ತುಂಬಿಸಿ ಅನೇಕ ರಾಸಾಯನಿಕ ವಸ್ತುಗಳನ್ನು ಅನಿಲಗಳನ್ನು ಭಟ್ಟಿಯಿಳಿಸು ತ್ತಾರೆ. ಕಟ್ಟಿಗೆಗಿಂತಲೂ ಗೆರಟೆಯೇ ಒಳ್ಳೆಯ ಕಚ್ಚಾ ಸಾಮಗ್ರಿಯೆಂಬುದು ತಜ್ಞರ ರಿಗೆ ಮನದಟ್ಟಾಗಿದೆ. ಇದು ಅಧಿಕ ಲಾಭಕರ. ತಾಪೋತ್ಪನ್ನ ಕಾರ್ಯಕ್ಕೆ ಬಳಸುವ ಅನಿಲ ವಿಪುಲ ಪ್ರಮಾಣದಲ್ಲಿ ಗೆರಟೆಯಿಂದ ಸಿಗುತ್ತದೆ.

ಪರ್ಫುರಾಲ್ ರಾಸಾಯನಿಕ ವಸ್ತುಗಳಲ್ಲಿ ಗಣ್ಯವಾದುದು. ತೆಂಗಿನ ಗೆರಟೆ ಯಿಂದ ಇದು ಲಭಿಸುತ್ತದೆ. ಅಗಾಧ ಪ್ರಮಾಣದಲ್ಲಿ ಪರ್ಫುರಾಲ್ ಉತ್ಪಾದನೆ ಕೈಗೂಡಿದರೆ ನಮ್ಮ ಬದುಕು ಸುಖಮಯಗೊಳ್ಳುವುದಕ್ಕೆ ಸಹಕಾರಿ.



ಸಿಡಿಮದ್ದು ಹಾಗೂ ಅನಿಲಗಳ ಸರಬರಾಜಿಗೆ ಅವಶ್ಯವಾದ ಅಸಿಟೋನ್ ರಾಸಾ ಯನಿಕ ವಸ್ತುವೂ ಗೆರಟೆಯಿಂದ ಸಿಗುತ್ತದೆ. ಅದರಿಂದ ಪ್ರಧಾನವಾಗಿ ಸಿಗುವ ಮೀಥೈಲ್ ಆಲ್ಕೊಹಾಲ್ ಎಂಬ ರಾಸಾಯನಿಕ ದ್ರವ್ಯದಿಂದ ಹಲವಾರು ಔಷಧಿ ಗಳನ್ನು ಉತ್ಪಾದಿಸುತ್ತಾರೆ. ಪ್ಲಾಸ್ಟಿಕ್, ಕ್ರಿಮಿನಾಶಕ ದ್ರವ್ಯಗಳು, ಫಾರ್ಮಾಲ್ಡಿ ಹೈಡ್, ಕೃತಕ ಬಣ್ಣಗಳು ಮತ್ತು ಜಾಕಾಯಿ ಮರದ ಕೆಲಸ ಕಾರ್ಯಗಳಲ್ಲಿ ಅದರ ಉತ್ಪನ್ನ ಪಾತ್ರವಹಿಸುತ್ತದೆ.

ಕೈಗಾರಿಕ ಪ್ರಪಂಚಕ್ಕೆ ಅಧಿಕ ಸಾಮರ್ಥ್ಯವಿರುವ ಇಂಗಾಲ ಒಂದು ವರದಾನ. ಕರಟದಲ್ಲಿ ಹೆಚ್ಚು ಶಕ್ತಿಯಿರುವ ಶುದ್ಧ ಇಂಗಾಲ ಲಭಿಸುತ್ತದೆ. ಕುದಿಯುವ ನೀರಿನ ಪರಿಷ್ಕರಣೆ, ಜೀವಸತ್ವ ಹಾಗೂ ಔಷಧಿಗಳ ತಯಾರಿಕೆ, ಸಕ್ಕರೆ, ಸಸ್ಯ ಮೂಲ ತೈಲ ಗಳ ಉತ್ಪಾದನೆಗೆಲ್ಲ ಈ ಇಂಗಾಲ ಆಧಾರವಸ್ತು. ಎಷ್ಟು ಭಯಂಕರ ಅನಿಲವಾದರೂ ಅದನ್ನು ಕರಟದ ಇಂಗಾಲ ಹೀರಿಕೊಳ್ಳುವ ಸಾಮರ್ಥ್ಯ ಪಡೆದಿರುವ ಕಾರಣ ಯುದ್ಧ ಗಳಲ್ಲಿ ಪ್ರಯೋಗಿಸಬಹುದಾದ ಅಸ್ತ್ರಗಳಲ್ಲಿರುವ ವಿಷಭರಿತ ಅಣುಗಳಿಂದ ಸೈನಿಕರನ್ನು ಕಾಪಾಡಲು ಮುಖವಾಡಗಳಿಗೆ ಇದೇ ಇಂಗಾಲವನ್ನು ಪೂಸುವುದು ಯೋಗ್ಯವಾಗಿದೆ ಯೆಂದು ವಿಜ್ಞಾನಿಗಳು ಹೇಳುತ್ತಾರೆ

ತೆಂಗಿನ ಚಿಪ್ಪಿನಿಂದ ತಯಾರಿಸಿದ ಇದ್ದಿಲು ಚಿನ್ನದ ಕೆಲಸಗಾರರಿಗೆ ಅವಶ್ಯ ಬೇಕು. ಅದರಲ್ಲಿ ಕಟ್ಟಿಗೆಯ ಇದ್ದಲಿಗಿಂತ ಅಧಿಕ ಶಾಖವಿದೆ. ಗೆರಟೆಯನ್ನು ಕಪ್ಪಾ ಗುವವರೆಗೆ ಸುಟ್ಟು ನೀರಿನ ಆವಿ ಮತ್ತು ಆಮ್ಲದೊಂದಿಗೆ ಹದಗೊಳಿಸಿದಾಗ ಇದ್ದಿಲು ಸಿದ್ಧಗೊಳ್ಳುವುದು. ಇದರಲ್ಲಿ ಗಾಳಿಯಲ್ಲಿ ವಿಲೀನವಾಗುವ ಅನಿಲಗಳು ಇಲ್ಲ.

ಕ್ರಿಮಿನಾಶಕ ವಸ್ತುಗಳಲ್ಲಿ ಪ್ರಮುಖವಾದ ಫಿನಾಯಿಲ್ ಎಲ್ಲರಿಗೂ ಪರಿಚಯ ವಿರುವ ಹೆಸರು. ಕ್ರಿಮಿನಿವಾರಕ ಸಾಬೂನುಗಳ ತಯಾರಿಕೆಯಲ್ಲೂ ಅದಕ್ಕೆ ಸ್ಥಾನ ವಿದೆ. ಗೆರಟೆಯಿಂದ ಫಿನಾಯಿಲ್ ಕೂಡ ಲಭಿಸುತ್ತದೆ.

ಗೆರಟೆಯಿಂದ ರಾಸಾಯನಿಕಗಳನ್ನು ಬೇರ್ಪಡಿಸಿದ ಬಳಿಕ ಪಾತ್ರೆಯ ತಳದಲ್ಲಿ ಉಳಿಯುವ ಅದರ ಚೂರುಗಳನ್ನು ಯಾವುದೇ ಮರಕ್ಕೆ ಬಳಿದರೂ ಕ್ರಿಮಿ ಕೀಟಗಳು, ಗೆದ್ದಲುಗಳು ಆ ಮರವನ್ನು ಬಾಧಿಸುವುದಿಲ್ಲ. ಶರೀರದ ಹಲವು ಚರ್ಮರೋಗಗಳಿಗೆ ಇದೊಂದು ಸಿದ್ಧೌಷಧ.

ತೆಂಗಿನ ಬೆಳೆ ವಿಪುಲವಾಗಿರುವ ನಮ್ಮ ದೇಶದಲ್ಲಿ ನಿರರ್ಥಕಗೊಳಿಸಲಾಗುತ್ತಿರುವ ಕರಟವನ್ನು ಸದುಪಯೋಗಪಡಿಸಲು ಪ್ರಯತ್ನಿಸುವುದು ಅವಶ್ಯಕವಾಗಿದೆ. ●

# ಬಡವರ ಕಸ್ತೂರಿ ಬೆಳ್ಳುಳ್ಳಿ

(ಕೆಲ ವಿವೇಚನೆ)

ಎನ್. ಎಸ್. ಗದಣಿಕರ
ಧಾರವಾಡ, ಶುಕ್ರವಾರ ಪೇಟೆ ನವಲೂರ ಅಗಸಿ.

"Over the ages, the garlic has been considered a cure for a host of ailments. Thanks to its pungent smell, it has also acquired the odium of being an undesirable entity.

N. Subramanium

(ಅಸಂಖ್ಯಾತ ವರ್ಷಗಳಿಂದಲೂ ಬೆಳ್ಳುಳ್ಳಿ ಅನೇಕ ರೋಗ ರುಜಿನಗಳನ್ನು ನಿವಾರಿಸುವ ಸಂಜೀವಿನಿ ಎನಿಸಿದೆ. ಅದರ ವಾಸನೆ ಹಲವರಿಗೆ ಮಾದಕ, ಆದರೂ ಅದನ್ನು ಬಳಸುವ ಮನಸ್ಸು ಅನೇಕರಿಗೆ)

"ಹೆಸರಿನಲ್ಲೇನಿದೆ ? ಗುಲಾಬಿಯನ್ನು ಬೇರಾವ ಹೆಸರಿನಿಂದ ಕರೆದರೂ ಅದರ ಸುವಾಸನೆಗೆ ಕುಂದೆ ?" ಇದು ಮಾನ್ಯಕವಿ ಷೇಕ್ಸ್‌ಪಿಯರನು ತನ್ನ ಮೇರು ಕೃತಿ ರೋಮಿಯೋ ಜ್ಯೂಲಿಯೆಟ್‌ನಲ್ಲಿ ತೆಗೆದ ಉದ್ಗಾರ ಎಷ್ಟೊಂದು ಸಮಂಜಸ ನುಡಿ ! ಹೇಗೆ ಕರೆದರೂ ಗುಲಾಬಿ ಗುಲಾಬಿಯಲ್ಲವೆ ಮತ್ತೆ ?

ಮೇಲಿನ ಮಾತನ್ನೇ ಬೆಳ್ಳುಳ್ಳಿಯ ಬಗೆಗೆ ಸಹಜವಾಗಿ ಉಸುರಬಹುದು. ಏನು ಮಾಡಿದರೂ ಅದರ ವಾಸನೆಯನ್ನಡಗಿಸಲು (Over Powering) ಅಸಾಧ್ಯ. ಈರುಳ್ಳಿಗೆ (ಉಳ್ಳಿಗಡ್ಡಿ–Onions) ಇದು ಸರಿ ಸರಿ ಇದನ್ನ ತಿಂದು ಎಷ್ಟೋ ಕಾಲ ಗತಿಸಿದ್ದರೂ ಅದರ ವಾಸನೆ ಮೂಗು ಕಚ್ಚಿರುವುದು ಏನಿದ್ದರೂ ಬೆಳ್ಳುಳ್ಳಿ ಬೆಳ್ಳುಳ್ಳಿಯೆ ! ಅದಕ್ಕೆ ಸರಿಯಾಗುವ ಇನ್ನೊಂದು ವಸ್ತು ಅದರ ಪ್ರೇಮಿಗಳಿಗೆ ಹೊಳೆದಿಲ್ಲ. ಸುರಕ್ಷಿತರಿಗಿಂತ (?) ಕೂಲಿ ಕುಂಬಳಿ ಮಾಡಿ ಬದುಕುವವರಿಗೆ ಬೆಳ್ಳುಳ್ಳಿ ಇಲ್ಲದ ಬಾಳು ಬೇಳೇ ಸೈ. ಖಾರದೊಡನೆ ಇದು ಇಲ್ಲದಿದ್ದರೆ ಏನೋ ಕಳೆದುಕೊಂಡ ಹಳಹಳ ಇಂತಹರ ಪಾಲಿಗೆ ತಪ್ಪಿದ್ದಲ್ಲ !

## ದೇವಾಲಯ ಸಂದರ್ಶನ

ಮೂಲತಃ ಬೆಳ್ಳುಳ್ಳಿಯು (Allium Sativum) ಕಿರು ಎಲೆಗಳ ಗಡ್ಡೆ. ದಕ್ಷಿಣ ಯುರೋಪಿನ ಬೆಳೆ. ಕ್ರಮೇಣ ಅದು ಪೌರ್ವಾತ್ಯ ದೇಶ ಆಶ್ರಯಿಸಿತು. ಇದು ಲಿಲಿ ಹೂವಿನ ಬಳಗದ್ದು. ಬಿಳಿ, ಕೆಂಪು ವರ್ಣದ ಕಾಯಿಗಳೊಂದಡಗೂಡಿದ ಇದು ಹಿಂದಿಯಲ್ಲಿ "ಲಸನ್" ಎಂದು ಹೆಸರಾಗಿರುವದು. ಉತ್ತರ ಭಾರತದ ಬಯಲು ಪ್ರದೇಶದ ಅಪರೂಪ ಬೆಳೆ ಇದು ಸೆಪ್ಟಂಬರ್ ಇಲ್ಲವೆ ನವೆಂಬರ್ ತಿಂಗಳುಗಳಲ್ಲಿ



ಇದನ್ನು ಬೆಳೆಯುವುದುಂಟು ಸರ್ವ ಸಾಮಾನ್ಯ ಹವಾಮಾನ ಅವಶ್ಯ. ಸರ್ಗಸಾ ಈರುಳ್ಳಿ ಬೆಳೆಯುವಲ್ಲಿ ಇದು ಸಾಧ್ಯ

ಬೆಳ್ಳುಳ್ಳಿಯು ಆಹಾರಕ್ಕೆ ಒಂದು ಬಗೆಯ ರುಚಿಯನ್ನು ಕಂಪನ್ನು ತರುವುದೆಂದು ವಿಶ್ವದಲ್ಲೆಲ್ಲ ಅದಕ್ಕೆ ಅಖಂಡ ಮಾನ್ಯತೆ. ದಕ್ಷಿಣ ಯುರೋಪಿನಲ್ಲಿ ಇದರ ವಿಪುಲ ಬಳಕೆಯನ್ನು ಕಂಡು ಸೋಜಿಗ ಪಡದೆ ವಿಧಿ ಇಲ್ಲ. ಹಲವು ಶಿಷ್ಟ ಭಾರತೀಯರಿಗೆ ಇದು ಸಂಪೂರ್ಣ ತ್ಯಾಗ ವೈಲಿಗೆಯೇ ಸೈ ! ಬಹುಶಃ ಈರುಳ್ಳಿಯಷ್ಟೇ ಅವರ ಪಾಲಿಗೆ ಇದು ಅಗ್ರಾಹ್ಯ. ತಾಮಸೀ ಆಹಾರವೆಂದು ಪರಿಗಣಿಸಲಾದುದು ನಿಜ. ಏನಿದ್ದರೇನು ? ಇಂದಿನಂತೆ ಹಿಂದೂ ಬೆಳ್ಳುಳ್ಳಿ ವಾಸನೆ ಅನೇಕರಿಗೆ ಹಿಡಿಸಲಿಲ್ಲ. ಕಾಲಾಂತರದಲ್ಲಿ ಇದಕ್ಕೆ ಧಾರ್ಮಿಕ ಮನ್ನಣೆ ಸಿಗಲಿಲ್ಲ. ಪೌರ್ವಾತ್ಯ ದೇಶಗಳಲ್ಲಿಯಂತೂ ಬೆಳ್ಳುಳ್ಳಿಯನ್ನು ಕೀಳೆಂದು ಬೀಳುಗಳೆಯುವುದೇ ಹೆಚ್ಚು. ಕೆಳ ಜನಾಂಗದವರ ಪ್ರಿಯ ಆಹಾರಾಂಶ ಇದು ! ದ್ವಿಜಕುಲ ಇದನ್ನು ಕೈಯಿಂದ ಕೂಡ ಇಂದೂ ಮುಟ್ಟುವದು ಸಾಧ್ಯವಿಲ್ಲ. ಹಿಂದಿನವರಂತೂ ಇನ್ನೂ ಕರ್ಮಠ ಜನಾಂಗ !

## ಸ್ಪರ್ಧಾ ಸಮಯ

ಪ್ರಾಚೀನ ಈಜಿಪ್ಟಿನಲ್ಲಿಯೇ ಧರ್ಮೋಪದೇಶಕರು ಬೆಳ್ಳುಳ್ಳಿ ಅಸ್ಪೃಶ್ಯ ಎಂದು ಹೆಸರಿಸಿ ಅದನ್ನು ತಿನ್ನುವವರನ್ನು ಮಹಾಮಾತೆ ಸಿಬಿಲ್ ದೇವಾಲಯವನ್ನು ಸಂದರ್ಶಿಸಗೊಡುತ್ತಿರಲಿಲ್ಲ. ಆ ದೇವಿಯ ಸಂದರ್ಶನವೇ ಇಂತಹ ಮನೆ ಮುರುಕರಿಗೆ ಅಯುಕ್ತ ಎಂಬ ಪ್ರತೀತಿ ನೆಲಸಿತ್ತು. ಮಹಮ್ಮದ ಪೈಗಂಬರರ ಮನಸ್ಸಿನಲ್ಲಿಯೂ ಬೆಳ್ಳುಳ್ಳಿಯ ಬಗೆಗೆ ಆದರವಿರಲಿಲ್ಲ. ಆದರೆ ಭಕ್ತಗಣವನ್ನು ಸಂತೈಸಲೆಂದು, ಅವರ ಮನ ನೋಯಿಸಬಾರದೆಂದು ಜುಕ್ಕು ಜುಲುಮೆಯಿಂದ ಸೇವಿಸುತ್ತಿದ್ದರು. ಉಳ್ಳಿಗಡ್ಡಿಯದೂ ಇದೇ ಗತಿ. ಎರಡೂ ಬಹಿಷ್ಕೃತ !

ಇದೇನಿದ್ದರೂ ಗ್ರೀಕರಿಗೆ ಮಾತ್ರ ಬೆಳ್ಳುಳ್ಳಿಯನ್ನು ಬಿಟ್ಟು ಬಾಳುವುದು ಬಿಗಿ ಎನಿಸಿದ್ದಿತು. ಆಟ–ಪಾಟ, ವಿನೋದ–ವಿಹಾರ ಸನ್ನಿವೇಶಗಳಲ್ಲಿ ಬೆಳ್ಳುಳ್ಳಿಗೆ ಮಾನ್ಯತೆ ಇದ್ದದ್ದೇ. ವನಸ್ಪತಿಗಳ ಪಿತಾಮಹನೆಂದು ಹೆಸರುವಾಸಿಯಾದ ಹಿಪ್ಪೋಕ್ರೆಟಿಸ್‌ನಿಗೆ ಈರುಳ್ಳಿಗಿಂತ ಬೆಳ್ಳುಳ್ಳಿಯ ಬಗ್ಗೆ ಆದರ ವಿಶೇಷ ಇದ್ದಿತು. ರೋಮ ಸಾಮ್ರಾಜ್ಯವನ್ನು ಕಟ್ಟುವ ಕಾಲದಲ್ಲಿ ಸೈನಿಕರು, ಗುಲಾಮರು, ಕೂಲಿಕಾರರು ವಿಶಿಷ್ಟ ಶಕ್ತಿ ಬರಲೆಂದು ಬೆಳ್ಳುಳ್ಳಿಯನ್ನು ಹೆಚ್ಚಾಗಿ ಸೇವಿಸುತ್ತಿದ್ದರು. ಆದರೆ ಭಾರತದಲ್ಲಿ ಧರ್ಮಿಷ್ಠ ಬ್ರಾಹ್ಮಣರಿಗೆ ಎಂದು ಇದು ಆಗುತ್ತಿರಲಿಲ್ಲ. ಮಹಾಕವಿ ಹೊರೇಸನು ತನ್ನ ತೃತೀಯ ಇಕೋಡಿನಲ್ಲಿ ಬೆಳ್ಳುಳ್ಳಿಯನ್ನು ಹೀಗಳೆದಿರುವನು.

ಹಿಂದಕ್ಕೆ ಕೆಳವರ್ಗದ ಜನಾಂಗಕ್ಕೆಲ್ಲ ಬಳ್ಳೊಳ್ಳಿ ಆಹಾರದ ಒಂದು ಅವಿಭಾಜ್ಯ ಅಂಗವಾಗಿ ಹೆಸರಾಗಿತ್ತು. ಕೆಲಸಗಾರರಿಗೆ ಅದರ ರುಚಿ ಗೊತ್ತು! ಅಪರಾಧಿಗಳ ಪಾಪಪರಿಮಾರ್ಜನೆಗೆಂದು ಸೆರೆಮನೆಯಲ್ಲಿ ಬಳ್ಳೊಳ್ಳಿಯ ಬಳಕೆ ಬಹಳ ಇತ್ತು. ಅದು ಪಾಪನಿವಾರಕ ಆಗಿತ್ತಂತೆ! ನರಕದ ದೇವತೆಯಾದ ಹೆಕೇಟಳ ಪ್ರಿಯ ಆಹಾರವೆಂದು ಮುಖ ಮುದ್ದುಮಾಡುವವರಿಗೆ (Sorcery Witch craft) ಇದು ಅವಶ್ಯಕ ವಸ್ತುವಾಗಿತ್ತು. ಬೆಳ್ದಿಂಗಳಿನ ಇರುಳು ಸ್ಮಶಾನದಲ್ಲಿ ಶವ ಸಂಸ್ಕಾರ ನಡೆಸುವಾಗ ಇದು ಅಪರೂಪ ವಸ್ತು. ಬಹುಶಃ ಊದು ಬತ್ತಿಯ ಜನಾಂಗದ್ದಿದು. ಧೂಪ ದೀಪಗಳೊಡನೆ ಇದರ ಪ್ರಾಶಸ್ತ್ಯ ಇರಬೇಕು.

ಮಧ್ಯಯುಗದಲ್ಲಿ ಶಕುನ, ಮೂಢನಂಬಿಕೆಗಳಲ್ಲಿ ಜನರಿಗೆ ಭಕ್ತಿ ಇದ್ದಾಗ ಕಾಡು ಪ್ರಾಣಿ, ದೆವ್ವ ಭೂತಗಳ ನಿವಾರಣೆಗಾಗಿ ಬಳ್ಳೊಳ್ಳಿಗೆ ಮನ್ನಣೆ ಇದ್ದಿತು. ಅಶುಭ ನಿವಾರಣೆಯಲ್ಲಿ ಇದರ ಪಾತ್ರ ವಿಶೇಷ. ಇಂದಿಗೂ ಬೋಲಿವಿಯಾದಲ್ಲಿ ಐಮರಾ ಭಾರತೀಯರು ಬೆಳ್ಳುಳ್ಳಿಯ ಬೇಳೆಯನ್ನು ಬಳಿಯಲ್ಲಿ ಇಟ್ಟುಕೊಂಡಿರುವದುಂಟು. ಅದು ಮಾಂಗಲ್ಯದ್ಯೋತಕ ಎತ್ತುಗಳ ಸ್ಪರ್ಧಾ ಸಮಯದಲ್ಲಿ ತಮಗೆ ಯಶದೊರೆಯಿತೆಂಬ ಹಂಬಲಿಗೆ ಮೂಲ ಇದು.

ಯುಗ ಯುಗಗಳಲ್ಲಿಯೂ ದೇಶ ವಿದೇಶಗಳಲ್ಲಿಯೂ ಬಳ್ಳೊಳ್ಳಿಯ ಔಷಧಿ ಗುಣವನ್ನು ಅಲಕ್ಷಿಸಿಲ್ಲ. ಪ್ರಾಚೀನ ಈಜಿಪ್ಟ್, ಬೆಬಿಲೋನಿಯಗಳಲ್ಲಿ ಅಸಂಖ್ಯ ಭಯಾನಕ ರೋಗಗಳಿಗೆ ಇದು ಉಚಿತ ಉಪಚಾರವಾಗಿತ್ತು. ಉಸಿರಿನ ರೋಗಗಳಿಗಂತೂ ಬೆಳ್ಳೊಳ್ಳಿ ಅವಶ್ಯಕ ಎಂದು ಹಿಪೋಕ್ರೆಟಿಸನು ಅಭಿಪ್ರಾಯ ಪಟ್ಟಿರುವನು.

ಕ್ರಿಮಿನಾಶಕ:-

ಬೆಳ್ಳೊಳ್ಳಿಯ ಕಂಪಿನ ಗುಣವನ್ನನುಲಕ್ಷಿಸಿ ಆ್ಯಂಗ್ಲೊ ಸ್ಯಾಕ್ಸನ್‌ರು ಅದನ್ನು ಔಷಧದಲ್ಲಿ ಉಪಯೋಗಿಸುತ್ತಿದ್ದರು. ಮಧ್ಯಯುಗೀನ ಇಂಗ್ಲಂಡಿನಲ್ಲಿ ಬೆಳ್ಳೊಳ್ಳಿಯನ್ನು ಅನೇಕ ವನಸ್ಪತಿ ಉದ್ಯಾನಗಳಲ್ಲಿ ಬೆಳೆಸುತ್ತಿದ್ದರು. ೧೬೬೫ ರಲ್ಲಿ ಲಂಡನ್ನಿನಲ್ಲಿ ಮಹಾಪ್ಲೇಗು ಹಾಹಾಕಾರ ಎಬ್ಬಿಸಲು ಜನತೆ ನಂಜನ್ನು ಪರಿಹರಿಸಲು ವಿಪುಲವಾಗಿ ಬೆಳ್ಳೊಳ್ಳಿಯನ್ನು ಬಳಸಿತು.

ಇಂದೂ ನಮಗೆ ಬಳ್ಳೊಳ್ಳಿಯ ಘನತೆಯ ಅರಿವು ಉಂಟು. ನಮ್ಮ ಅತಿ ಉತ್ಸಾಹದ ಪ್ರಧಾನ ಸಚಿವರು ತಮ್ಮ ಇಳಿ ವಯಸ್ಸಿನಲ್ಲಿಯೂ ಊಟದಲ್ಲಿ ಇದನ್ನು ಉಪಯೋಗಿಸುತ್ತಿರುವುದು. ವೈದ್ಯರ ಹೇಳಿಕೆಯಂತೆ ಮಾಗಿದ ಬೆಳ್ಳೊಳ್ಳಿಯು ಕ್ರಿಮಿನಾಶಕ ಎನಿಸಿದೆ. ನಮ್ಮ ದೇಶದಲ್ಲಿಯ ಅಪಾಯಕಾರಿ ಕ್ರಿಮಿಗಳ ವಿನಾಶ



ಕ್ಕಾಗಿ ಇದರ ಹೊರತು ಇನ್ನೊಂದು ಮದ್ದು ಇಲ್ಲ. ಇದರ ವೆಚ್ಚವೂ ಕಡಿಮೆ. ಬೆಳ್ಳೊಳ್ಳಿಯ ಗುಣ ಪಡಿಸುವ ರೋಗ ರುಜಿನಗಳ ಲೆಕ್ಕ ಇಡುವುದೇ ಬಿಗಿ. ಕೆಮ್ಮು, ನೆಗಡಿ, ಸಂಧಿವಾತಕ್ಕೆ ಬೆಳ್ಳೊಳ್ಳಿ ಉಪಯುಕ್ತ. ಕಿವಿ ನೋವು, ಅಪಚನಕ್ಕೆ ಇದು ರಾಮ ಬಾಣ. ರಕ್ತ ಶುದ್ಧಿಗೂ ಇದು ಬೇಕು. ಕೆಲವು ಪ್ರಯೋಗ ಶಾಲೆಗಳು ಬೆಳ್ಳೊಳ್ಳಿಯ ಇನ್ನು ಹಲವಾರು ಗುಣಗಳನ್ನು ಕಂಡು ಹಿಡಿಯುವಲ್ಲಿ ನಿರತವಾಗಿರುವವು. ಅದರ ಮಾದಕ ವಾಸನೆಯನ್ನು ತಡೆಯಲು ಶ್ರಮಿಸುತ್ತಿರುವವು. ಜಪಾನನಲ್ಲಿ ವಾಸನೆ ಇಲ್ಲದ ಬೆಳ್ಳೊಳಿಯನ್ನು ಬೆಳೆಯುವ ಯೋಜನೆ ಮಾಡುತ್ತಿರುವರು. ಇದು ಕಾಲಾಂತರದಲ್ಲಿ ಉಳಿದ ದೇಶಗಳಲ್ಲಿ ಪ್ರಚಾರಕ್ಕೆ ಬಂದೀತು. ಇದರ ವಾಸನೆ ಹಿಡಿಸುವವರಿಗೆ ಇಂತಹದು ವರವಲ್ಲವೆ? ಆಗ ಆಕಾರದಲ್ಲಿ ಅದಕ್ಕೆ ಸರಿದಡೆ ವಸ್ತು ಯಾವುದೆನಿಸೀತು? ●

(ವಿವಿಧ ಮೂಲಗಳಿಂದ)

---

ಜಲದ ಮಂಟಪದ ಮೇಲೆ ಉರಿಯ ಚಪ್ಪರವನಿಕ್ಕಿ, ಆಲಿಕಲ್ಲ ಹಸೆಯ ಹಾಸಿ, ಕಾಲಿಲ್ಲದ ಹೆಂಡತಿಗೆ, ತಲೆಯಿಲ್ಲದ ಗಂಡ ಬಂದು ಮದುವೆಯಾದನು. ಎಂದೆಂದೂ ಬಿಡದ ಬಾಳುವೆಗೆ ಕೊಟ್ಟರೆನ್ನ ಚನ್ನಮಲ್ಲಿಕಾರ್ಜುನನೆಂಬ ಗಂಡಂಗೆನ್ನ ಮದುವೆ ಮಾಡಿದರು.

* * *

ಗುರುವೇ ತೆತ್ತಿಗನಾದ, ಲಿಂಗವೇ ಮದುವಣಿಗನಾದ, ಆನು ಮದುವಳಿಗೆಯಾದೆನು. ವಸುಧೆಯ ಭಕ್ತರೆಲ್ಲರು ನಿಬ್ಬಣಿಗರಾದರು. ಕೊಟ್ಟರು ಸಾದೃಶ್ಯವಪ್ಪ ಗಂಡನ ನೋಡಿ. ಇದು ಕಾರಣ ಚನ್ನಮಲ್ಲಿಕಾರ್ಜುನಯ್ಯನೇ ಗಂಡನೆನಗೆ.

* * *

ಮಂಗಳವೇ ಮಜ್ಜನವೆನಗೆ, ವಿಭೂತಿಯೇ ಒಳುಗುಂದದರಿಸಿನವೆನಗೆ, ದಿಗಂಬರವೇ ದಿವ್ಯಾಂಬರವೆನಗೆ, ಶಿವಪಾದರೇಣುವೆ ಅನುಲೇಪವೆನಗೆ, ರುದ್ರಾಕ್ಷಿಯೇ ಮೈದೊಡಿಗೆ ಎನಗೆ, ಶರಣರ ಪಾದಂಗಳೇ ತೊಂಡಿಲ ಬಾಸಿಗವೆನಗೆ, ಚನ್ನಮಲ್ಲಿಕಾರ್ಜುನನೇ ಗಂಡನೆನಗೆ, ಆನು ಚನ್ನಮಲ್ಲಿಕಾರ್ಜುನಂಗೆ ಮದುವಳಿಗೆ, ಎನಗೆ ಬೇರೆ ಶೃಂಗಾರವೇಕೆ ಹೇಳರವ್ವಾ?

—ಅಕ್ಕಮಹಾದೇವಿ

# ಕರ್ನಾಟಕವು ವಾಸ್ತವವಾದ ಸ್ವಾತಂತ್ರ್ಯದತ್ತ ಮುನ್ನಡೆಯುತ್ತಿದೆ

ಸ್ವಾತಂತ್ರ್ಯೋತ್ಸವವನ್ನು ಆಚರಿಸುವುದೆಂದರೆ ನಮಗೆ ಸಹಜವಾಗಿಯೇ ಹೆಮ್ಮೆ. ನಮ್ಮ ಭಾರತ ದೇಶದ ಮಹಾನ್ ಜನತೆಯ ಪುನರ್ಜನ್ಮದ ಸಂಕೇತ ಈ ಸ್ವಾತಂತ್ರ್ಯ ದಿನ.

ಸ್ವಾತಂತ್ರ್ಯದ ನಿಜವಾದ ಚೈತನ್ಯವನ್ನು ಎತ್ತಿ ಹಿಡಿಯುವಲ್ಲಿ ಕರ್ನಾಟಕ ನಿಜಕ್ಕೂ ಮೇಲುಗೈಯಾಗಿದೆ. ಇತ್ತೀಚಿನ ವರ್ಷಗಳಲ್ಲಿ ನಮ್ಮ ರಾಜ್ಯ ಸಾಧಿಸಿರುವ ಪ್ರಗತಿಯನ್ನು ಪರಿಶೀಲಿಸಿ ನೋಡಿದರೆ ಸಾಕು, ಈ ಅಂಶ ಸ್ಪಷ್ಟವಾಗಿ ಮನವರಿಕೆಯಾಗುತ್ತದೆ.

**ಗ್ರಾಮೀಣ ಕುಡಿಯುವ ನೀರು ಪೂರೈಕೆ:-** ಭಾರತದ ಯೋಜನಾ ಆಯೋಗದ ಸಮೀಕ್ಷೆಯ ಪ್ರಕಾರ ಗ್ರಾಮೀಣ ಕುಡಿಯುವ ನೀರು ಪೂರೈಕೆ ಯೋಜನೆಯನ್ವಯ 1984-85 ರಲ್ಲಿ ನಮ್ಮ ರಾಜ್ಯ ಇಡೀ ದೇಶದಲ್ಲೇ ಪ್ರಥಮ ಸ್ಥಾನದಲ್ಲಿತ್ತು. ಕಳೆದ ಮೂರು ವರ್ಷದಲ್ಲಿ 28,658 ಕೊಳವೆ ಬಾವಿಗಳನ್ನು ತೋಡಲಾಗಿದೆ.

**ಜೀತ ಮುಕ್ತರಿಗೆ ಪುನರ್ವಸತಿ:-** ಜೀತ ಪದ್ಧತಿಯ ನಿರ್ಮೂಲನದಿಂದ ರಾಜ್ಯದಲ್ಲ 62,689 ಮಂದಿ ಜೀತದಾಳುಗಳು ಬಿಡುಗಡೆ ಹೊಂದಿದರು. ಇವರಲ್ಲಿ 1985-86 ರ ಅಂತ್ಯದ ವೇಳೆಗೆ 39,752 ಮಂದಿಗೆ ಪುನರ್ವಸತಿ ಕಲ್ಪಿಸಲಾಗಿದೆ.

**ಶಾಲಾ ಮಕ್ಕಳಿಗೆ ಉಚಿತ ಸಮವಸ್ತ್ರ:-** ರಾಜ್ಯದ ಸರ್ಕಾರಿ ಶಾಲೆಗಳಲ್ಲಿ ವ್ಯಾಸಂಗ ಮಾಡುವ ಒಂದು ಮತ್ತು ಎರಡನೇ ತರಗತಿಯ ಮಕ್ಕಳಿಗೆ ಉಚಿತ ಸಮವಸ್ತ್ರ ವಿತರಣೆ ಮಾಡಲಾಗುತ್ತಿದೆ. ಈ ಯೋಜನೆಯಿಂದ 22 ಲಕ್ಷಕ್ಕೂ ಹೆಚ್ಚು ವಿದ್ಯಾರ್ಥಿಗಳು ಪ್ರಯೋಜನ ಹೊಂದಿದ್ದಾರೆ.

**ಶಾಲಾ ಮಕ್ಕಳಿಗೆ ಉಚಿತ ಪಠ್ಯ ಪುಸ್ತಕಗಳ ವಿತರಣೆ:-** ಸರ್ಕಾರ ಕಾರ್ಯ ರೂಪಕ್ಕೆ ತಂದಿರುವ ಇನ್ನೊಂದು ಕ್ರಾಂತಿಕಾರಿ ಕಾರ್ಯಕ್ರಮ. ಇದರಿಂದ ಸರ್ಕಾರಿ ಶಾಲೆಯ ಒಂದರಿಂದ ನಾಲ್ಕನೇ ತರಗತಿವರೆಗಿನ ಸುಮಾರು 53 ಲಕ್ಷ ವಿದ್ಯಾರ್ಥಿಗಳಿಗೆ ಉಚಿತವಾಗಿ ಪಠ್ಯ ಪುಸ್ತಕಗಳನ್ನು ನೀಡಲಾಗಿದೆ.

**ಅನಾಥ ವಿಧವೆಯರಿಗೆ ಮಾಶಾಸನ:-** ರೂ. 1500 ಕ್ಕಿಂತ ಕಡಿಮೆ ವರಮಾನವಿರುವ ವಿಧವೆಯರಿಗೆ 50-00 ರೂ. ಮಾಸಾಶನ ನೀಡಿಕೆ 1985-86 ರಲ್ಲಿ ಈ ಪ್ರಯೋಜನ ಪಡೆದವರ ಸಂಖ್ಯೆ ಸುಮಾರು 3 ಲಕ್ಷ.

**ಹೆರಿಗೆ ಭತ್ಯ:-** ಮಹಿಳಾ ಕೃಷಿ ಕಾರ್ಮಿಕರಿಗೆ ಹೆರಿಗೆಗೆ ಅಥವಾ ಬಾಣಂತಿ ತನದ ಕಾಲದಲ್ಲಿ ಮಾಸಿಕವಾಗಿ 100 ರೂ. ಗಳಂತೆ ಮೂರು ತಿಂಗಳು ಧನ ಸಹಾಯ. 1985-86 ರಲ್ಲಿ ಈ ಸೌಲಭ್ಯ ಪಡೆದವರ ಸಂಖ್ಯೆ 85,018.

**ತಾಳಿ ಭಾಗ್ಯ:-** ಸಾಮೂಹಿಕ ವಿವಾಹಗಳನ್ನು ಪ್ರೋತ್ಸಾಹಿಸುವ ಹಾಗೂ ಮದುವೆ ದುಂದು ವೆಚ್ಚವನ್ನು ಕಡಿಮೆ ಮಾಡುವುದಕ್ಕಾಗಿ ರೂಪಿಸಲಾಗಿರುವ ಕಾರ್ಯಕ್ರಮದನ್ವಯ, 1985-86 ರಲ್ಲಿ 2,300 ಕ್ಕೂ ಹೆಚ್ಚು ಮಂದಿ ಪ್ರಯೋಜನ ಪಡೆದಿದ್ದಾರೆ.

**ಕಡಿಮೆ ದರದಲ್ಲಿ ಆಹಾರ ಧಾನ್ಯ ವಿತರಣೆ:-** ವರ್ಷಕ್ಕೆ 3,500 ರೂ. ಗಿಂತ ಕಡಿಮೆ ವರಮಾನವಿರುವ ಗ್ರಾಮೀಣ ಕುಟುಂಬಗಳ ಸಹಾಯಾರ್ಥ ಇನ್ನೊಂದು ಕಾರ್ಯಕ್ರಮ ಈ ಕಾರ್ಯಕ್ರಮದಿಂದ ಸುಮಾರು 30 ಲಕ್ಷ ಗ್ರಾಮೀಣ ಬಡ ಕುಟುಂಬಗಳು ಅನುಕೂಲ ಹೊಂದಿವೆ.

**ಜನತಾ ಸೀರೆ ಮತ್ತು ಪಂಚೆಗಳ ವಿತರಣೆ:-** ವರ್ಷಕ್ಕೆ 3,500 ರೂ. ಗಿಂತ ಕಡಿಮೆ ವರಮಾನವಿರುವ ಸುಮಾರು 43 ಲಕ್ಷ ಗ್ರಾಮೀಣ ಕುಟುಂಬಗಳವರಿಗೆ 15 ರೂ ಗೆ ಒಂದು ಪಂಚೆ ಹಾಗು ಟರ್ಕಿ ಟವಲ್ (?) ಪೀಸು ಮತ್ತು 12.50 ರೂ. ಗೆ ಒಂದು ಸೀರೆ ಮತ್ತು ರವಿಕೆ ಕಣ ನೀಡಲಾಗುತ್ತಿದೆ.

**20-ಅಂಶಗಳ ಕಾರ್ಯಕ್ರಮದಲ್ಲಿ ಉನ್ನತ ಮಟ್ಟದ ಸಾಧನೆ:-** ಅಂಕಿ ಅಂಶಗಳು ಹಾಗೂ ಯೋಜನಾ ಆಯೋಗದ 1985-86 ರ ರಾಜ್ಯವಾರು ಸ್ಥಾನ ಸೂಚಿ. ಇವುಗಳ ಪ್ರಕಾರ ಕರ್ನಾಟಕ ಈ ಕೆಳಕಂಡ ಕ್ಷೇತ್ರಗಳಲ್ಲಿ ಉನ್ನತ ಸ್ಥಾನದಲ್ಲಿದೆ.

*ಗ್ರಾಮೀಣ ಭೂರಹಿತ ಕಾರ್ಮಿಕರಿಗೆ ಉದ್ಯೋಗ ಖಾತರಿ ಯೋಜನೆ. *ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾರ್ಯಕ್ರಮ. *ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟುಗಳ ಅಭಿವೃದ್ಧಿ. *ಹಳ್ಳಿಗಳಿಗೆ ಕುಡಿಯುವ ನೀರಿನ ಪೂರೈಕೆ. *ಗ್ರಾಮೀಣ ವಿದ್ಯುದೀಕರಣ *ಸಸಿ ನೆಡುವಿಕೆ *ಕುಟುಂಬ ಯೋಜನೆ. *ಪ್ರಾಥಮಿಕ ಆರೋಗ್ಯ ಕೇಂದ್ರ ಸ್ಥಾಪನೆ. *ಸಮಗ್ರ ಶಿಶು ಕಲ್ಯಾಣ ಸೇವಾ ಕೇಂದ್ರಗಳು. *ಗೊಬ್ಬರ ಅನಿಲ ಸ್ಥಾವರ. *ವ್ಯವಸಾಯಕ್ಕೆ ಪಂಪ್ ಸೆಟ್‌ಗಳ ವಿದ್ಯುದೀಕರಣ.

**ಬರ ಪರಿಹಾರ:-** ಬರಗಾಲ ನಿವಾರಣೆಗಾಗಿ ಸರ್ಕಾರವು ಬಹುಮುಖವಾದ ಕಾರ್ಯಕ್ರಮವನ್ನು ಜಾರಿಗೆ ತಂದಿದೆ. ಇದರಿಂದಾಗಿ ಕೊಳವೆ ಬಾವಿಗಳು. ಕೆರೆಗಳಲ್ಲಿ ನೀರಾವರಿ ನಾಲೆಗಳು. ಗ್ರಾಮ ಸಂಪರ್ಕ ರಸ್ತೆಗಳು ಮತ್ತಿತರ ಶಾಶ್ವತ ಆಸ್ತಿಯ ನಿರ್ಮಾಣವಾಗಿದೆ.

**ಸಾಮಾಜಿಕ ಅರಣ್ಯಾಭಿವೃದ್ಧಿ:-** ಕಳೆದ ಒಂದು ವರ್ಷದಲ್ಲಿ ಸರ್ಕಾರ 39,000 ಹೆಕ್ಟೇರ್ ಭೂಮಿಯಲ್ಲಿ ಅರಣ್ಯಾಭಿವೃದ್ಧಿ ಯೋಜನೆಯನ್ವಯ ರೈತರುಗಳಿಗೆ ತಮ್ಮ ಜಮೀನಿನಲ್ಲಿ ನೆಡಲು 25.46 ಕೋಟಿ ಸಸಿಗಳನ್ನು ಹಂಚಿದೆ.

**ಕರ್ನಾಟಕ ವಾರ್ತೆ**

# ನನ್ನ ದಿನಚರಿ

—ಬಿ. ಸುಬ್ರಾಯ ಅಡಿಗ
ನಿವೃತ್ತ ಅಧ್ಯಾಪಕರು, ಸೀಡಂ, ಬಳ್ಳಾರಿ ಜಿಲ್ಲೆ. 583119

ನಾನೀಗ ಸಾಯಲೂ ಸಿದ್ಧನಿದ್ದೇನೆ. ಆದರೆ ನನ್ನ ಇಷ್ಟಾರ್ಥವೊಂದು ಈಡೇರಲಿಲ್ಲವಲ್ಲಾ ಎಂಬ ಅಸಮಾಧಾನ ನನ್ನನ್ನು ಕಾಡುತ್ತಿದೆ. ನಾನು ಒಮ್ಮೆಯೂ ಉಷಃಕಾಲದ ದರ್ಶನ ಪಡೆಯದಾದೆ

ಪ್ರಾಚೀನ ಗ್ರಂಥಗಳಲ್ಲೂ ಕವಿಗಳ ಕಾವ್ಯಗಳಲ್ಲಿ ಉಷಃಕಾಲದ ಆಕರ್ಷಕ ವರ್ಣನೆ ಬರುತ್ತದೆ. ದಿನದ ೨೪ ತಾಸುಗಳಲ್ಲಿ ಒಮ್ಮೆ ಪೂತ್ರ ಪೂರ್ವಾಕಾಶ ಟಮೋಟೋ ಹಣ್ಣಿನಂತೆ ಕೆಂಪಾಗುವುದು. ಇದು ತುಂಬಾ ಮನೋಹರ ದೃಶ್ಯವಲ್ಲವೇ ? ಇದನ್ನು ನಾನು ಮೊದಲು ನಂಬಲಿಲ್ಲ. ಆದರೆ ಎಲ್ಲರೂ ಹೇಳುತ್ತಿದ್ದುದರಿಂದ ನಂಬಲೇಬೇಕಾಯಿತು. ಇಷ್ಟೆಲ್ಲ ಜನ ಸುಳ್ಳು ಹೇಳುತ್ತಾರೆಯೆ ?

ನಿದ್ದೆಯಿಂದ ಎಬ್ಬಿಸಲ್ಪಟ್ಟಾಗ ಚೆನ್ನಾಗಿ ಬೆಳಕು ಹರಿದಿರುತ್ತದೆ. ರೇಡಿಯೋದ ಎಷ್ಟೋ ಕಾರ್ಯಕ್ರಮಗಳು ಮುಗಿದಿರುತ್ತವೆ. ಈ ರೇಡಿಯೋದವರ ಬುದ್ಧಿಗೇನೆನ್ನಲಿ ? ಅಂಥ ನಸುಕಿನ ವೇಳೆ ಇವರ ಕಾರ್ಯಕ್ರಮ ಕೇಳಲು ಅದಾರು ತಾನೆ ಎಚ್ಚರಿದ್ದಾರು ? ರೇಡಿಯೋ ಹಾಗೂ ಪತ್ರಿಕೆಗಳು 'ಜಾಗೃತಿ"ಯ ಸಾಧನಗಳೆಂದು ನಾನು ಯಾವುದೇ ಭಾಷಣದಲ್ಲಿ ಕೇಳಿದೆ. ನನಗೇನೂ ಅರ್ಥವಾಗಲಿಲ್ಲ. ಏಕೆಂದರೆ ಜಾಗೃತಿ (ಎಚ್ಚರ) ಆಗದೆ ನೀವೆಂತು ರೇಡಿಯೋ ಕೇಳಬಲ್ಲಿರಿ ? ಅದ್ದರಿಂದ ಕಾರ್ಯಕ್ರಮಗಳನ್ನು ಬೆಳಗಿನ ೯ ಗಂಟೆಗೆ ಆರಂಭಿಸುವುದು ಲೇಸು. ಅಷ್ಟರೊಳಗೆ ನಾವು ಮೋರೆ ತೊಳೆದು ಒಂದೆರಡು ಸಲ ಚಹ ಸೇವನೆ ನಡೆಸಿ ನವ್ಯಸ್ಫೂರ್ತಿ ಪಡೆದಿರುತ್ತೇವೆ.

ಬೆಳಗ್ಗೆ ಬೇಗ ಏಳಲು ಒಂದು ಉದ್ದೇಶವಾದರೂ ಇರಬೇಡವೇ ? ತಾವು ಬೆಳಗ್ಗೆ ೫ಕ್ಕೇ ಏಳುತ್ತೇವೆಂದು ಕೆಲವರು ಹೆಮ್ಮೆ ಪಡುತ್ತಾರೆ. ಆದರೆ ಅವರು ಕೂಡ ಬೆಳಗ್ಗೆ ೪ಕ್ಕೇ ಏಳುವ ಮಹಾಶಯರಿದಲು ತಲೆತಗ್ಗಿಸಬೇಕಾಗುತ್ತದೆ ಇದೆಲ್ಲ ವ್ಯರ್ಥವಲ್ಲವೇ ಅಗ ಯಾರಾದರೂ ತಾವೇ ಖ್ಯಾತಿಗಳಿಸಬೇಕೆಂದು ಬೆಳಗ್ಗೆ ೩ ಗಂಟೆಗೇ ಎದ್ದಾರು. ಈ ಅರ್ಥರಹಿತ ಕೃತ್ಯದಿಂದೇನು ಲಾಭ! ಎಲ್ಲರೂ ನಿದ್ರಿಸುವ ವೇಳೆ ನಿಮ್ಮನ್ನಾದರೂ ಹೊಗಳುವರೆ ?— ಎಂದು ಕಣ್ಣರಳಿಸಿ ನೋಡುವುದು ಅದಾವ ಸಭ್ಯತೆ ? ೩ ಗಂಟೆಗೇ ಏಳುವ ನೀವು ಮಲಗುವುದಾದರೂ ಏಕೆ ?

# ಪುಣ್ಯಕ್ಷೇತ್ರ ಮಾಲಿಕೆ-೬
# ಇಂಗಳೇಶ್ವರ—ಬಾಗೇವಾಡಿ:—

"ವ್ಯಾಖ್ಯಾನ ವಿಭೂಷಣ"
—ಪಂಡಿತ ಕೆ. ಪಿ. ಶಿವಲಿಂಗಯ್ಯ
ಪ್ರಿನ್ಸಿಪಾಲ್, ಗೌ॥ ಪ್ರಿ ಯೂನಿವರ್ಸಿಟಿ ಕಾಲೇಜ್ ಮಲ್ಲೇಶ್ವರಂ, ಬೆಂಗಳೂರು-3

ಕ್ರಿ. ಶ. 11 - 12-ನೆಯ ಶತಮಾನದಲ್ಲಿ ಇವೆರಡೂ ಯಮಳ–ನಗರಗಳು (Twin cities) ಎನಿಸಿದ್ದವು. ಸ್ವಲ್ಪ ಹೆಚ್ಚು ಕಡಿಮೆ ಈಗಿನ ಹುಬ್ಬಳ್ಳಿ–ಧಾರವಾಡಗಳಂತೆ ಎನ್ನಬಹುದು. ಬಿಜಾಪುರ ಜಿಲ್ಲೆಯಲ್ಲಿವೆ ಈಯೆರಡು ಊರುಗಳೂ ಬಸವನ ಬಾಗೇವಾಡಿ ಎಂದೇ ಪ್ರಸಿದ್ಧವಾಗಿರುವ ಇದು ತಾಲ್ಲೂಕು ಕೇಂದ್ರವಾಗಿದೆ. ಬಾಗೇವಾಡಿಗೆ ಆರು ಮೈಲಿಗಳ ದೂರದಲ್ಲಿ ಇಂಗಳೇಶ್ವರ ಗ್ರಾಮವಿದೆ. ಇದು ಅತ್ಯಂತ ಪುರಾತನವಾದ ಸ್ಥಳ. ಇಲ್ಲಿ ಎಂಟು ಹಿಂದಿನ ಕಾಲದ ದೇವಾಲಯಗಳಿವೆ. ಈ ಪೈಕಿ ಎರಡು ಗುಹಾಂತರ ದೇವಾಲಯಗಳು. ಮೂರು ದೇವಸ್ಥಾನಗಳನ್ನು ಕ್ರಿ. ಶ. 1128 ರಲ್ಲಿ ನೀಲಕಂಠನಾಯಕ ಎಂಬುವನು ಕಟ್ಟಿಸಿದನೆಂದು ಶಾಸನಗಳಿಂದ ತಿಳಿದು ಬರುತ್ತದೆ. ಇವುಗಳಲ್ಲೆಲ್ಲ ಸೋಮೇಶ್ವರ ದೇವಸ್ಥಾನ ಅತ್ಯಂತ ದೊಡ್ಡದು. ಇದರಲ್ಲಿ ಮೂವತ್ತಾರು ಕಂಬಗಳಿವೆ. ಮುಖ ಮಂಟಪದ ಚಾವಣಿಯಲ್ಲಿ ನವಗ್ರಹಗಳನ್ನು ಕೆತ್ತಲಾಗಿದೆ. ದ್ವಾರದಲ್ಲಿ ಸ್ತ್ರೀದ್ವಾರಪಾಲಕರಿದ್ದಾರೆ. ಇಲ್ಲಿ ಒಂದು ಹಳಗನ್ನಡ ಶಾಸನವಿದೆ. ನಾರಾಯಣ ದೇವಸ್ಥಾನದಲ್ಲಿ ಇಪ್ಪತ್ನಾಲ್ಕು ಗುಂಡಗಿರುವ ಕಂಬಗಳಿವೆ. ಇದರಲ್ಲಿ ಎರಡು ಹಳಗನ್ನಡ ಶಾಸನಗಳಿದೆ. ಊರಿನ ದಕ್ಷಿಣ ಭಾಗದಲ್ಲಿ ಶೋಬನದೇವರ ದೇವಸ್ಥಾನ ಇದೆ. ಇದರಲ್ಲಿ ಹದಿನೆಂಟು ಕಂಬಗಳಿವೆ. ಒಂದು ಕಂಬದ ಮೇಲೆ ಶಾಸನವಿದೆ. ಇದರ ಭುವನೇಶ್ವರಿಯಲ್ಲಿ ಸುಂದರವಾಗಿ ದಿಕ್ಪಾಲಕರನ್ನು ಕೆತ್ತಲಾಗಿದೆ. ಕಲ್ಲೇಶ್ವರ ದೇವಸ್ಥಾನವು ಹೆಸರೇ ಸೂಚಿಸುವಂತೆ ಶಿವ ದೇವಾಲಯ ಕಾಳಪ್ಪನ ದೇವಸ್ಥಾನದಲ್ಲಿ ಪಕ್ಷಿಗಳು, ಸರ್ಪಗಳು, ಸ್ತ್ರೀ ವಿಗ್ರಹಗಳು– ಇವನ್ನು ಸುಂದರವಾಗಿ ಕಡೆಯಲಾಗಿದೆ. ಗರ್ಭಗೃಹದಲ್ಲಿ ಲಿಂಗವಿದೆ. ಆದಕಾರಣ ಇದೂ ಶೈವದೇವಾಲಯವೆಂದಾಯಿತು. ಪರಮಾನಂದ ದೇವಾಲಯ ಅರನೆಯದು. ಎರಡು ಗುಹಾಂತರ ದೇವಾಲಯಗಳಲ್ಲಿ ಒಂದು ಸಿದ್ಧೇಶ್ವರನದು, ಇನ್ನೊಂದು ಅಕ್ಕ ನಾಗಮ್ಮನವರದು. ಇವು ಈ ಊರಿನ ಹತ್ತಿರದಲ್ಲಿರುವ ಬೆಟ್ಟದಲ್ಲಿ ಇವೆ. ಈಯೆರಡು ದೇವಾಲಯಗಳಿಂದ ಆ ಕಾಲದಲ್ಲಿ ವೀರಶೈವ ಧರ್ಮವನ್ನು ಪ್ರಜ್ವಲಗೊಳಿಸಿದ ಶ್ರೀ ರೇವಣ



ಸಿದ್ಧೇಶ್ವರರ ಪ್ರಭಾವಲಯ ಈ ಭಾಗದಲ್ಲಿ ವಿಶೇಷವಾಗಿದ್ದರೆಂದೂ, ಅಕ್ಕನಾಗಮ್ಮನವರು ತಮ್ಮ ಬಾಲ್ಯವನ್ನು ತಾಯಿ ಮಾದಲಾಂಬಿಕೆಯ ತೌರೂರಾದ ಇಂಗಳೇಶ್ವರದಲ್ಲೇ ಕಳೆದರೆಂದೂ ಸ್ಪಷ್ಟವಾಗಿ ತಿಳಿದು ಬರುತ್ತದೆ. ಸಿದ್ಧೇಶ್ವರ ಗುಡಿಯ ಸಮೀಪದ ಗವಿಯಲ್ಲಿ ಸಂಗಮೇಶ್ವರ ಲಿಂಗವಿದೆ. ಕೂಡಲ ಸಂಗಮ ಕ್ಷೇತ್ರದ ಪ್ರಭಾವವು ಈ ಪ್ರಾಂತ್ಯದ ಮೇಲಾಗಿರುವುದು ಸುಸ್ಪಷ್ಟ.

ಬಾಗೇವಾಡಿ ಸಹ ಇಂಗಳೇಶ್ವರದಂತೆ ಆ ಕಾಲದಲ್ಲಿ ವಿದ್ವಾಂಸರುಗಳಿಂದ ತುಂಬಿದ್ದ ಗ್ರಾಮ. ಇದನ್ನು ಅಗ್ರಹಾರವೆಂದೇ ಕರೆಯುತ್ತಿದ್ದರು. ಬಸವಣ್ಣನವರ ತಂದೆ 'ಮಾದರಸ' ರಿಗೆ ಗ್ರಾಮದ ಮುಖಂಡರು ಎನ್ನುವುದಕ್ಕಿಂತ ಅವರ ಪಾಂಡಿತ್ಯಕ್ಕೆ ಅಷ್ಟೊಂದು ಪ್ರಾಮುಖ್ಯತೆಯಿದ್ದುದು ತಂದೆಯ ವಿದ್ವತ್ತು ಅಣ್ಣನವರ ಬಾಲ್ಯದಲ್ಲಿ ಹೆಚ್ಚು ಉತ್ತೇಜನಕಾರಿಯಾಗಿದ್ದಿತು. ಮೇಲೆ ತಿಳಿಸಿರುವ( ಬಸವನ ಬಾಗೇವಾಡಿಯೆಂದೇ ಪ್ರಸಿದ್ಧವಾಗಿರುವ) ಈ ಗ್ರಾಮವು ತಾಲ್ಲೂಕು ಕೇಂದ್ರ. ಬಿಜಾಪುರಕ್ಕೆ ಇಪ್ಪತ್ತೇಳು ಮೈಲಿಗಳ ದೂರದಲ್ಲಿದೆ. ತೇಲಗಿ ರೈಲ್ವೆ ನಿಲ್ದಾಣಕ್ಕೆ 12 ಮೈಲಿದೂರವಿದೆ. ಕಲ್ಯಾಣದ ಕುಲಚುರ್ಯ ರಾಜ (ಚಾಲುಕ್ಯ ಚಕ್ರವರ್ತಿ ನೂರ್ಮಡಿ ತೈಲಪನ ಉತ್ತರಾಧಿಕಾರಿ) ಬಿಜ್ಜಳನ ಮಹಾಮಂತ್ರಿಯೂ, ದಂಡನಾಯಕರೂ ಆಗಿದ್ದ ಭಗವಾನ್ ಬಸವೇಶ್ವರರು ಜನಿಸಿದುದು ಇಲ್ಲಿಯೇ. ಆದ್ದರಿಂದಲೇ ಬಸವನ ಬಾಗೇವಾಡಿ ಎಂಬ ಹೆಸರು ಬಂದಿರುವುದು. ಇದೊಂದು ಪವಿತ್ರ ಯಾತ್ರಾಸ್ಥಳವಾಗಿದೆ. ಈ ಊರಿಗೆ ಸಮೀಪದಲ್ಲಿರುವ ಮನಗೋಳಿ ಎಂಬ ಸ್ಥಳದ ಹನುಮಂತನ ದೇವಾಲಯದಲ್ಲಿರುವ ಶಿಲಾ ಶಾಸನದಲ್ಲಿ ಬಸವೇಶ್ವರರ ಪೂರ್ವೇತಿಹಾಸವನ್ನು ಹೇಳುವ ಮಹತ್ವಪೂರಿತ ಶಾಸನವಿದೆಯೆಂದು ಡಾ॥ ಫ್ಲೀಟ್ ಉಲ್ಲೇಖಿಸಿದ್ದಾರೆ. ಬಾಗೇವಾಡಿಯ ಬಸವೇಶ್ವರ ದೇವಾಲಯದಲ್ಲಿರುವ ನಂದಿಯನ್ನು ಕುರಿತೇ ತಾಯಿ ಮಾದಲಾಂಬಿಕೆಯು ಪುತ್ರಾಪೇಕ್ಷೆಯಿಂದ 'ನೋಂಪಿ' ಯನ್ನು ಆಚರಿಸಿದ್ದು. ಗಣಪತಿ, ಸಂಗಮೇಶ್ವರ, ಮಲ್ಲಿಕಾರ್ಜುನ ಮೂರ್ತಿಗಳೂ ಆ ದೇವಸ್ಥಾನದಲ್ಲಿವೆ. ಈ ಊರಿನಲ್ಲಿ ವಿಠೋಬ ಮತ್ತು ರಾಮೇಶ್ವರ ದೇವಸ್ಥಾನಗಳೂ ಇವೆ. ಬಸವಣ್ಣನ ಬಾವಿ ಮತ್ತು ಸಾರಂಗ ಬಾವಿ– ಎಂದೆರಡು ಮುಖ್ಯ ಬಾವಿಗಳಿವೆ. ಈ ಊರಿಗೆ ಹಿಂದೆ ನೀಲಗಿರಿ ಪಟ್ಟಣ ಎಂದೂ, ಬಾಗೋಡಿ ಎಂದೂ ಹೆಸರಿದ್ದುದಾಗಿ ತಿಳಿದು ಬರುತ್ತದೆ. ಬಸವೇಶ್ವರರು ಹುಟ್ಟಿದ ಮನೆಯ ಜಾಗವೆಂದು ಈಗಲೂ ಅಲ್ಲಿನ ಜನರು ತೋರಿಸುತ್ತಾರೆ.

ಒಟ್ಟಿನಲ್ಲಿ ಇವೆರಡೂ ಕ್ಷೇತ್ರಗಳು ವೀರಶೈವಾಭಿಮಾನಿಗಳಿಗೆ ಪವಿತ್ರವಾದ ಹಾಗೂ ಅತ್ಯಂತ ಇಷ್ಟವಾದ ಸ್ಥಳಗಳಾಗಿವೆ.

# ತಳಿರು-ತೋರಣ

(ಸಾಮಾಜಿಕ ಕಿರು ಕಾದಂಬರಿ)

—ಎನ್. ಎಸ್. ಗವಗಕರ, ಶುಕ್ರವಾರ ಪೇಟೆ, ನವಲೂರು ಅಗಸೆ, ಧಾರವಾಡ.

ದಿನಗಳೆದವು. ಒಂದು ತಿಂಗಳೊಳಗಾಗಿಯೇ ಆಕೆ ಗುಣಮುಖಳಾದ ಚಿಹ್ನೆಗಳು ಡಾಕ್ಟರರಿಗೆ ಕಂಡುಬಂದವು. ಬಿಡುಗಡೆಯ ವಿಚಾರ ತಿಳಿಸಿದರು. ನಿಯಮದಂತೆ ವೆಚ್ಚದ ಹಣ ಸಲ್ಲಿಸಿ ಕರೆದುಕೊಂಡು ಹೋಗಿರೆಂದು ಹೇಳಿದರು. ಅದೇ ದಾರಿ ಕಾಯುತ್ತಿದ್ದ ವಿಶ್ವನಾಥನು ಬಾಡಿಗೆಯ ಕಾರು ತಂದಿದ್ದ. ಸಂಜೆಯ ಆರೂವರೆಗೆ ಕಲ್ಯಾಣದ ಕಡೆಗೆ ಗಾಡಿ ಇರುವಾಗ ನಾಲ್ಕಕ್ಕೇ ಬಿಡುಗಡೆ ಮಾಡಿದರು. ಅಲ್ಲಿಯ ಡಾಕ್ಟರರ ಮನೆಯಲ್ಲಿ ಆಕೆಗೆ ಚಿಕ್ಕ ಪ್ರಮಾಣದ ಬೀಳ್ಕೊಡುವ ಸಮಾರಂಭ ಏರ್ಪಟ್ಟಿದ್ದಿತು. ಅಲ್ಲಿಂದ ಹೊರಡುವ ಮೊದಲು ಆವಾರದಲ್ಲಿಯ ಮಾರುತಿ ದೇವಾಲಯಕ್ಕೆ ಆಕೆ ಹೋಗಿ ಬಂದಳು, ಬಾಗಿಲಲ್ಲಿ ಮಗುವಿದ್ದಿತು. ಸಹಾಯಕ್ಕೆಂದು ವಿಶ್ವನಾಥನು–ತನ್ನ ಅಣ್ಣ–ಶ್ರೀಕಾಂತನನ್ನು ಕರೆದುತಂದಿದ್ದ. ಶ್ರೀಕಾಂತನೂ ಅವರೊಡನೆ ಕಲ್ಯಾಣಕ್ಕೆ ಹೋಗಿ ಅವರನ್ನು ನಿಟ್ಟಿಗೆ ಹಚ್ಚಿ ಬರಲು ನಿರ್ಧರಿಸಿದ್ದ. ಅದು ಅವನ ಸೋದರ ಋಣ. ಡಾಕ್ಟರರ ಸಲಹೆಯಂತೆ ದಾರಿಯಲ್ಲಿ ಈರ್ವರೂ ಸೋದರರೂ ಆಕೆಯೊಡನೆ ವಿಶೇಷ ಮಾತಾಡಲಿಲ್ಲ. ಭದ್ರಗಿರಿಯಲ್ಲಿಯ ಮನೆಗೂ ಹೋಗಲಿಲ್ಲ. ಮಾವ ಮೋಹನರಾಯರ ಭೆಟ್ಟಿಯನ್ನು ಮಾಡಿಸಲಿಲ್ಲ, ನೇರವಾಗಿ ಕಾರು ರೈಲು ನಿಲ್ದಾಣಕ್ಕೆ ಸಾಗಿತು–ಮಿಂಚಿನ ಗತಿಯಿಂದ. ವೇಳೆ ಸಾಕಷ್ಟು ಕಾಲ ಕಡಿಮೆಕೊಂಡು ಬಿದ್ದುದರಿಂದ ಗಾಡಿಯಲ್ಲಿ ವಿರಾಮವಾಗಿ ಪ್ರವಾಸಿಸಲು ಸ್ಥಳ ರಿಝರ್ವೇಶನ್ ಮಾಡಿಸಲಾಯಿತು. ಆದರೂ ಶ್ರೀಕಾಂತನು ತನ್ನೊಡನೆ ಕಲ್ಯಾಣಕ್ಕೆ ಹೊರಟಿದ್ದಾನೆಂದು ವಿಶ್ವನಾಥ ಹೆಂಡತಿಗೆ ತಿಳಿಸಲಿಲ್ಲ. ಅವನು ಇನ್ನೊಂದು ಡಬ್ಬಿಯಲ್ಲಿ ಕುಳಿತು ಪ್ರವಾಸ ಮಾಡಿದ. ಊಟ, ಸ್ಪೆನ್ಸರ ಚಹದ ವ್ಯವಸ್ಥೆ ಎಲ್ಲರಿಗೂ ಇದ್ದಿತು. ಪ್ರವಾಸ ಸುಖಕರವಾಯ್ತು, ದಾರಿಯಲ್ಲಿ ಅಂತಹ ಅನರ್ಥಗಳು ಒದಗಲಿಲ್ಲ. ಎಲ್ಲ ದೈವ ಕೃಪೆ. ಈ ಕಾಲಾವಧಿಯಲ್ಲಿ ಎರಡು ಮೂರು ತಿಂಗಳು–ವಿಶ್ವನಾಥನ ಮನಸಿನಲ್ಲಿ ಅಪೂರ್ವ ಪರಿವರ್ತನೆ ಆಯಿತು. ಹಿಂದೆ ದೇವರು ದಿಂಡರು, ಬ್ರಾಹ್ಮಣರು, ಸಂಧ್ಯಾ ಪೂಜೆ ಪುನಸ್ಕಾರ–ಎಂದರೆ ಸಿಡಿದು ಮೂರು ಮಾರು ಆಚೆಗೆ ಹಾರಿ ಬೀಳುತ್ತಿದ್ದವನು ಈಗ ಪಾಪಭೀರು ಆಗಿದ್ದ. ಶನಿದೇವರ ಸ್ತೋತ್ರ ತಪ್ಪದೆ ಅನ್ನುವುದು, ಒಪ್ಪತ್ತು ಸಂಧ್ಯಾವಂದನೆ ಕೂಡ ನಿರ್ವಹಿಸುತ್ತ ಬಂದಿದ್ದ. "ಸಂಕಟ ಬಂದಾಗ ವೆಂಕಟರಮಣ" ಎಂದು ಅನ್ಯರಿಗೆ ಅನಿಸಿದರೂ ಅವನು ಮಾತ್ರ ತನ್ನ ಹೆಂಡತಿಯ ಚಿತ್ತ ವಿಭ್ರಮೆ ದೈವೀ ಘಟನೆ, ಈಶ ಕ್ಷೋಭೆ ಎಂದೇ ಗ್ರಹಿಸಿದ್ದ.

ಇದೆಲ್ಲ ಮಾನಸಿಕ ಪರಿವರ್ತನೆ ಆಯಿತು. ಆದರೆ ವಿಶ್ವನಾಥನು ಹೆಂಡತಿಯ ಆರೋಗ್ಯಕ್ಕಾಗಿ ಹೆಚ್ಚಿನ ತ್ಯಾಗ ಮಾಡಬೇಕಾಗಿ ಬಂದುದು ವಿಶೇಷ ಸಂಗತಿ. ಕಲ್ಯಾಣದಲ್ಲಿ ಕೆಲ ದಿನ ಆಫೀಸಿಗೆ ಹೊರಡುವಾಗ ತಿಲೋತ್ತಮೆ ಮಕ್ಕಳನ್ನು ಕಟ್ಟಿಕೊಂಡು ಗಂಡನ ಬೆನ್ನು ಹತ್ತುತ್ತಿದ್ದಳು. ನೆರೆಹೊರೆಯಲ್ಲಿ ಇದು ಕೋಲಾಹಲ ಎಬ್ಬಿಸುತ್ತಿತ್ತು. ಹೆಂಡತಿಗೆ ಸುಸ್ಥಿತಿ ಉಂಟಾಗಲು ಸರಕಾರಿ ನೌಕರಿ ಬಿಡದೆ ಅನ್ಯ ಮಾರ್ಗವಿಲ್ಲ ಎನಿಸಿತು ಅವನಿಗೆ. ಅಂತೇ ನಡುವೆ ಹೋಗಿ ವಿಶ್ವನಾಥನು ನೌಕರಿಗೆ ರಾಜೀನಾಮೆ ಸಲ್ಲಿಸಿ ಬಂದಿದ್ದ. ಮೇಲಧಿಕಾರಿಗಳು "ಹೀಗೆ ಮಾಡುವದು ತರವಲ್ಲ. ಈ ಚಿತ್ತಕ್ಷೋಭೆಯು ಬಿರುಗಾಳಿ ಕ್ಷಣಿಕ. ಮರಳಿ ಮರಳಿ ವಿಚಾರಿಸು" ಎಂದು ನಿವೇದಿಸಿದರು. ಆದರೆ ಅವನು ಪೂರ್ವಾಪರ ವಿಚಾರಿಸಿ ರಾಜೀನಾಮೆ ಸಲ್ಲಿಸಿದ ಸ್ವೀಕೃತವಾಯ್ತು. ಮುಂದೆ ದೈವಯೋಗದಿಂದ ಅವನಿಗೆ ಅಲ್ಲಿಯೇ ಕಲ್ಯಾಣದಲ್ಲಿಯ ಶ್ರೇಷ್ಠ ಅಂತಾರಾಷ್ಟ್ರೀಯ ವಕೀಲಿ ಸಂಸ್ಥೆಯೊಂದರಲ್ಲಿ ಒಳ್ಳೆ ಹುದ್ದೆ ದೊರಕಿತು. ಹೊಟ್ಟೆಯ ಚಿಂತೆ ದೂರಾಯಿತು. ಇದೇ ಸುಸ್ಥಿತಿಯ ಅವಧಿಯಲ್ಲಿ ಎಂ.ಎ.ಎಲ್.ಎಲ್.ಎಂ. ಮುಗಿಸಿದ. ಆ ರಂಗದಲ್ಲಿಯೇ ನಾಲ್ಕಾರು ವರ್ಷಗಳ ಸಮಯದಲ್ಲಿ ಹತ್ತು ಹನ್ನೆರಡು ಕಾಯಿದೆ ಹೆಬ್ಬೊತ್ತಿಗೆಗಳನ್ನು ಬರೆದ. ಟೈಪ್, ಶಾರ್ಟ್‌ಹ್ಯಾಂಡ್, ಅಕೌಂಟನ್ಸಿ ಬಂದ ಮೂಲಕ ದೈನಿಕ ಗಳಿಕೆಯನ್ನು ಹೆಚ್ಚಿಸಿಕೊಂಡ. ತೀರ ಸಂಕ್ಷಿಪ್ತವಾಗಿ ಮೊನ್ನೆ ಮೊನ್ನೆ ಮಕ್ಕಳ ಮುಂಜಿವಿ ಮಾಡಿದನಂತೆ ಎಂದು ಶ್ರೀಕಾಂತನಿಗೆ ಓಲೆ ಬಂದಿದೆ. ಅದೂ ಸಲೂನಿನಲ್ಲಿಯೇ ನಡೆಯಿತು! ಬ್ಯಾಂಡ್ ಇಲ್ಲ, ಬಜಂತ್ರಿ ಇಲ್ಲ, ಮಂತ್ರವಿಲ್ಲ. ಕೇವಲ ಒಬ್ಬ ವ್ಯವಸಾಯಿ ವೈದಿಕ ಬ್ರಾಹ್ಮಣನಿಗೆ ಸೀದಾ, ದಕ್ಷಿಣೆ ಸಲ್ಲಿಸಲಾಯಿತಂತೆ! ಭಲೆ ಕಾಲ ಪ್ರವಾಹತೆ! ಅನುಕೂಲ ಸಿಂಧುವಿನ ಜಾದುವೆ!–ಎಂದು ಶ್ರೀಕಾಂತನು ಸೋಜಿಗದಿಂದ ಭದ್ರಗಿರಿಯಲ್ಲಿಯೇ ಶರಾ ಹಾಕಿದನು.

ಇಂದು ಶನಿವಾರ "ಮೊಗಲ್ ಎ ಅಝಾಮ್" ಚಿತ್ರಪಟ ಚಿತ್ರಾ ಥಿಯೇಟರಿನಲ್ಲಿದ್ದುದು ಪೇಟೆಯ ಚೌಕಿನಲ್ಲಿ ಜಾಹೀರಾತು ನೋಡಿದ್ದ ಶ್ರೀಕಾಂತ. ಸಂಜೆಗೆ ಆರರ ಶೋಕ್ಕೆ ಹೋಗುವದೆಂದು ನಿರ್ಧರಿಸಿದ. ಹಾಗೆ ಏನಾದರೂ ರಂಜನೆಯ ಚಟುವಟಿಕೆ ಹಾಕಿಕೊಳ್ಳದಿದ್ದರೆ ಪರಸ್ಥಳದಲ್ಲಿ ಹುಚ್ಚು ಹಿಡಿಯುವದೆ ಖಂಡಿತ ಎಂದುಕೊಂಡನು. ಮಧ್ಯಾಹ್ನದ ಊಟವಾಗಿ ಪ್ರದೀರ್ಘ ಕಾಲದ ನಿದ್ರೆ ಪೂರೈಸಿದ ನಂತರ ಮನೆಯಲ್ಲಿ ದೊಡ್ಡ ಕಪ್ಪು ತುಂಬ ಚಹ ಸೇವಿಸಿದನು. ತಿನ್ನುವ ಆಸೆಯಂತೂ ಹೇಗೊ ಹಾರಿಹೋಗಿತ್ತು. ಅನಂತರ ತನ್ನ ಪ್ರೀತಿಯ "ಮಿಂಟ್‌ಕೂಲ್" ಸಿಗರೇಟು ಹಚ್ಚಿದ. ಸ್ವಲ್ಪ ವೇಳೆ ವಾರಪತ್ರಿಕೆ ಓದಿ ಬೇಜಾರಾಗಲು ಹೊರಗೇ ವೇಳೆ ಕಳೆಯುವಾ ಇನ್ನು ಸಿನೇಮಾ ಸುರುವು ಆಗುವವರೆಗೆ ಎಂದು ನಿರ್ಧರಿಸಿ ವೇಷ ಭೂಷ ಮಾಡಿಕೊಂಡು ಹೊರಟ. ನಲವತ್ತು ವಯಸ್ಸನ್ನು ಎಂದೊ ಅವನು ದಾಟಿದ್ದರೂ ಅವನು ಇನ್ನು ವರನಂತೆ ಕಾಣುವದು ವೈಶಿಷ್ಟ್ಯವಾಗಿತ್ತು. ಶ್ರೀಕಾಂತನ ಅಂಗಮುಷ್ಟಿಮೇ



ಅಂತಹದು! ಪೇಟೆಯ ಕಡೆಗೆ ಸಾಗಿದ.

ಒಂಬತ್ತಕ್ಕೆ ಸಿನೇಮಾ ಬಿಡುತ್ತಿದ್ದರೂ ಶ್ರೀಕಾಂತನು ಎಂಟೂವರೆಗೆ ಥಿಯೇಟರಿನಿಂದ ಎದ್ದ. ಜಿಲೇಬಿ ಸವಿಮೆಂದು ಎಷ್ಟು ತಿನ್ನುವದು ಎಂದು ಹಾಗೆ ಮಾಡಿದ. ನಡುವೆ ದಾರಿಯಲ್ಲಿ "ವಿಲಾಸ ರೆಸ್ಟೋರಂಟ"ದಲ್ಲಿ ಚಹಾ ಉಪಹಾರದ ಶಾಸ್ತ್ರ ತೀರಿಸಿ ಮನೆಗೆ ಹೊರಟಾಗ ದಾರಿಯಲ್ಲಿ ಚಿತ್ರಪಟದ ಹುಚ್ಚೇ ತಲೆಗೆ ಏರಿತ್ತು. ಆ ರಂಗದಲ್ಲಿ ವಿಹರಿಸತೊಡಗಿದ. ನೆನಪು ಝುಗ್ಗೆಂದು ತೂರಿ ಬಂದವು.

ಶ್ರೀಕಾಂತನು ಒಳ್ಳೆ ರಸಿಕ ವ್ಯಕ್ತಿ, ಅವನದು ವಿಲಕ್ಷಣ ಪ್ರಕೃತಿ–ಚಿತ್ರಪಟದ ವಿಷಯದಲ್ಲಿ. ಅವನು ಅದಷ್ಟು ಹೊಸ ಚಿತ್ರಪಟಗಳನ್ನು ನೋಡುವವನಲ್ಲ. ಒಳ್ಳೆಯದಿದೆ ಎಂದು ಗೆಳೆಯರು ಹೇಳಿದರೆ ಅವನು ಅದನ್ನು ನೋಡಿ ಒಮ್ಮೆ ಪ್ರಯೋಗ ಮಾಡುತ್ತಿದ್ದ. ಯುಕ್ತ ಕಂಡರೆ ಮರಮರಳಿ ಅದನ್ನೇ ನೋಡುವನು. ಹಾಗೆ ಅವನು ಹಿಂದಕ್ಕೆ "ರತನ್" ಎಂಬ ಹಿಂದಿ ಚಿತ್ರಪಟವನ್ನು ಹೋದ ಹೋದಲ್ಲೆಲ್ಲ ಹಾಗೂ ಭದ್ರಗಿರಿಯಲ್ಲಿಯು ಲೆಕ್ಕ ಒಳಗೊಂಡು ಆರು ಸಲ ನೋಡಿದ್ದ. ಆ ವಸ್ತು, ಹಾಡು, ನಟನೆ ಅವನನ್ನು ಅಷ್ಟು ಮುಗ್ಧಗೊಳಿಸಿದ್ದವು. ಹಾಗೇ ಅವನು "ತಾನಸೇನ" ಚಿತ್ರಪಟ ಮರಳಿ ಮರಳಿ ನೋಡಿದ್ದ. ಮಬ್ಬಾಗಿದ್ದ, ಆ ಸೈಗಲ್ ಖುರ್ಶಿದರ ಸಂಗೀತಕ್ಕೆ ಮಾರುಹೋಗಿದ್ದನು. ಹಿಂದಿನ ಸಾಮಾಜಿಕ ಚಿತ್ರಪಟಗಳಲ್ಲಿ ಅವನಿಗೆ "ಕುಂಕು" ಬಹಳ ಹಿಡಿಸಿತ್ತು. ಅಲ್ಲಿಯ ಸಾಮಾಜಿಕ ವಸ್ತು, ಸಜೀವ ನಟನೆ, ಮೋಹಕ ಹಾಡುಗಳು ಸಂಸ್ಮರಣೀಯ ಎನಿಸಿದ್ದವು. ಇತ್ತಿತ್ತಲಾಗಿ ಅವನು ನೋಡಿದ "ಮಾನಿನಿ" ಎಂಬ ಮರಾಠಿ ಸಾಮಾಜಿಕ ಚಿತ್ರವು ಯೋಗ್ಯ ಎನಿಸಿತ್ತು. ಬಡವ ಬಲ್ಲಿದರ ಭೇದವು ಅವನಿಗೆ ಹೃದಯಸ್ಪರ್ಶಿಯಾಗಿ ಪರಿಣಮಿಸಿತ್ತು. ಚಿತ್ರದ ಹಿನ್ನೆಲೆ ಲಂಡನ್, ನ್ಯೂಯಾರ್ಕ, ಪ್ಯಾರಿಸ್, ಮುಂಬಯಿ ಆಗಿರದೆ ಕೊಲ್ಹಾಪುರ, ಸಾಂಗ್ಲಿ, ಮಿರ್ಜಿ ಆಗಿದ್ದವು. ಕಥಾನಾಯಕ, ನಾಯಿಕೆಯರ ತೀರ ಸ್ವಾಭಾವಿಕ ನಟನೆಗಂತೂ ಹೇಗೊ ದಂಗಾಗಿದ್ದ "ಶೋಲೆ, ನಿಶಾಂತ" ಹಿಂದಿ ಚಿತ್ರಗಳು ಸಾಕಷ್ಟು ಅವನನ್ನು ರಂಜಿಸಿದ್ದರೂ ಸ್ಟಂಟ್ ಭೀಭತ್ಸ ಹಿಡಿಸಲಿಲ್ಲ.

ಕನ್ನಡ ಚಿತ್ರಗಳಲ್ಲಿ ತೀರ ಮೊನ್ನೆ ಮೊನ್ನಿನ "ಸಂಸ್ಕಾರ, ವಂಶವೃಕ್ಷ, ಕಾಡು, ಉಪಾಸನೆ, ಎರಡು ಕನಸು" ಚಿತ್ರ ವಿಚಾರ ಪ್ರಚೋದಕ ಎನಿಸಿತ್ತು. ಹಾಗೆಯೇ "ಶರಪಂಜರ" ಹಾಡು, ದೃಶ್ಯ, ನಟನೆ ಇವುಗಳ ಮೂಲಕ ಮನಮೋಹಕ ಎನಿಸಿದ್ದಿತು. ವಿಡಂಬನೆಯ ಮಾನದಿಂದ "ಸಂಸ್ಕಾರ" ಮಾರ್ಮಿಕ ಎನಿಸಿತ್ತು. "Blow hot and cold" ಎಂಬ ಆಂಗ್ಲ ಚಿತ್ರವನ್ನಂತೂ ಶ್ರೀಕಾಂತನು ಕೇವಲ ಬೇಜಾರು ಕಳೆದುಕೊಳ್ಳಲು ಮಧ್ಯಾಹ್ನ ಭಾನುವಾರ ಹಿಂದೊಮ್ಮೆ ನೋಡಲು ಹೋಗಿದ್ದ. ಆದರೆ ಅದು ನಿಜಕ್ಕೂ ರೋಮಾಂಚಕಾರಿ ಪತ್ತೇದಾರಿ ಚಿತ್ರವಾಗಿ

ಪರಿಣಮಿಸಿತು. ಅಲ್ಲಿ ಬೇಕಾದಷ್ಟು ಶೃಂಗಾರವಿದ್ದರೂ ಅದು ಎಷ್ಟು ಭೀಭತ್ಸಕ್ಕಿಳಿದಿರಲಿಲ್ಲ. ಆಂಗ್ಲ ಚಿತ್ರವೆಂದರೆ ಕೇವಲ ಮುದ್ದಿನ ಮಳೆ ಎಂದು ಆರೋಪಿಸುತ್ತಿದ್ದ. ಶ್ರೀಕಾಂತನು ಅಂದು ತನ್ನ ಅಭಿಪ್ರಾಯ ಬದಲಿಸಿಕೊಂಡನು. ಶ್ರೀಕಾಂತ ಹೀಗೆಯೇ ವಿಚಾರದ ವಿಮರ್ಶೆಯು ಹಳವಂಡದ ಮಂಜಿನಲ್ಲಿ ಮನೆಗೆ ಬಂದಾಗ ತನ್ನ ಅತ್ತೆ ಆಕೆಯ ಗಂಡ ಎರಡು ಮೂರು ದಿನಗಳಲ್ಲಿಯೇ ಮರಳುವರೆಂಬ ಓಲೆ ಬಂದಿತ್ತು. ಹಳೆಯ "ಮಾಡರ್ನ್ ರಿವ್ಯೂ ಇಲಸ್ಟ್ರೇಟೆಡ್' ವೀಕ್ಲಿ ಪತ್ರಿಕೆ ಓದುವಾಗಲೇ ನಿದ್ರೆ ಆವರಿಸಿತು. ಮುಂಜಾನೆ ಎದ್ದಾಗ ಬೆಳ್ಳಂ ಬೆಳಗಾಗಿತ್ತು, ಚುರುಕು ಆಗಿ ತನ್ನ ಚಟುವಟಿಕೆಗಳನ್ನು ಆರಂಭಿಸಿದನು. ಉಷ್ಣೋದಕದ ನಂತರ ಅದು ಚಹಕ್ಕೆ ವಿಡಂಬನೆಗಾಗಿ ಕೇಶವ ರಾಯರು ಕೊಟ್ಟ ಹೆಸರು ಅದು ಅನಂತರ ಎಲೆ ಅಡಿಕೆ ತಂಬಾಕಿನ ಬಾರು ನಡಿಸಿದ.

## ಚತುರ್ಥ ಕಾಂಡ

ಸೋದರ ವಿಶ್ವನಾಥನು ಹೀಗೆ ಕಲ್ಯಾಣದಲ್ಲಿ ನೆಮ್ಮದಿಯಿಂದ ನೆಲಸಿರುವಾಗ ಶ್ರೀಕಾಂತನು ಆವನನ್ನು ಎರಡು ಮೂರು ಸಲ ಸಂದರ್ಶಿಸಿ ಅಲ್ಲಿಯೇ ಎಳೆಂಟು ದಿನ ನೆಲೆಸಿದ್ದ. ಅದು ಅವನು ತನ್ನ ಉಚ್ಚ ಪರೀಕ್ಷೆಗಾಗಿ ಕಾಶಿಗೆ ಹೊರಟಾಗ, ಹೀಗೆ ಹೋಗಲು ಅವನಿಗೆ ಪ್ರೋತ್ಸಾಹ ದೊರೆತುದು ಗೆಳೆಯ ರವಿಶಂಕರನಿಂದ. ಅವನು ಹಿಂದಿ, ಕನ್ನಡ, ಸಂಸ್ಕೃತ ವಿಷಯಗಳಲ್ಲಿ ಎತ್ತಿದ ಕೈ ಎರಡು ಸಲ ಶ್ರೀಕಾಂತ ಅವನ ಸಂಗಡವೆ ಕಾಶಿಗೆ ಹೋಗಿ ಅಲ್ಲಿ ವಾಸಿಸಿದನು. ಅಲ್ಲಿ ಈರ್ವರೂ ವಾದಿರಾಜಾಚಾರ್ಯರ ಮಠದಲ್ಲಿ ಇದ್ದರು. ಈ ಇಬ್ಬರಿಗೆ ಆಚಾರ್ಯರು ಒಂದು ಕೊಠಡಿಯನ್ನು ಕೊಟ್ಟಿದ್ದರು. ಅದು ಬಾಡಿಗೆಯ ಕರಾರಿನಿಂದಲ್ಲ, ಮುಖ್ಯವಾಗಿ ಆಚಾರ್ಯರಿಗೆ ಹಣದ ಆಸೆ ಇರಲಿಲ್ಲ. ಯಾತ್ರಿಕರು ಪ್ರೀತಿಯಿಂದ ಕೊಟ್ಟದ್ದನ್ನು ಸ್ವೀಕರಿಸುತ್ತಿದ್ದರು. ಹೀಗೆ ಬಂದ ಹಣವೇ ಸಾಕಷ್ಟಾಗಿ ಅವರಿಗೆ ಸಿರಿವಂತಿಕೆ ತಂದಿತ್ತು. ಇದರ ದ್ಯೋತಕವಾಗಿ ಅವರ ಕೈಯಲ್ಲಿ ಪೋಚೆ, ಕೊರಳಲ್ಲಿ ಬಂಗಾರದ ನಾಲ್ಕಾರು ಸರಗಳಿರುವವು. ಆಚಾರ್ಯರು ಕರ್ನಾಟಕದವರು, ಕನ್ನಡ ಅಸ್ಖಲಿತವಾಗಿ ಮಾತಾಡುತ್ತಿದ್ದರು. ಕನ್ನಡಿಗರೆಂದರೆ ಅವರಿಗೆ ಎಲ್ಲಿಲ್ಲದ ವಾತ್ಸಲ್ಯ, ಅವರಿಗೆ ಎಷ್ಟು ಸೌಕರ್ಯ, ಆತಿಥ್ಯ, ಸಲ್ಲಿಸಿದರೂ ಬೇಸರವಿಲ್ಲ. ಇವರ ಕುಟುಂಬ ಲಕ್ಷ್ಮೀಬಾಯಿ ಸಾಂಗಲಿಯವಳು. ಕನ್ನಡದಂತೆ ಮರಾಠಿ ಬಲ್ಲವಳು, ಈಕೆಯ ಸಂಬಂಧದಿಂದ ಆಚಾರ್ಯರಿಗೆ ಮರಾಠಿ ಸಾಧಿಸಿದೆ. ಆಚಾರ್ಯರಿಗೆ ಮೇಲಾಗಿ ಹಿಂದಿ, ಸಂಸ್ಕೃತ, ಮನೆತನದ ಕೊಡುಗೆಗಳಾಗಿದ್ದವು. ಇಷ್ಟಾಗಿ ಅವರು ವಾರಣಾಸಿ ಕಾರ್ಪೋರೇಶನ್ನಿನ ಸದಸ್ಯರು.

(ಮುಂದುವರಿಯುತ್ತದೆ)



# ಗ್ರಾಮಾಂತರ ಬಸವ ಜಯಂತಿ

—ಹೆಚ್. ವಿ. ವೀರಭದ್ರಯ್ಯ
ಕನ್ನಡ ಉಪನ್ಯಾಸಕರು, ಸಿದ್ಧಗಂಗಾ ಕಾಲೇಜು, ತುಮಕೂರು.

ಆತ್ಮೀಯ ಶರಣಬಂಧು,

ದಿನಾಂಕ 2-2-86 ರಂದು ಬಸವ ಜಯಂತಿ ಆಚರಣೆಗೆ ತನ್ನನ್ನು ಅರ್ಪಿಸಿಕೊಂಡ ಪುಣ್ಯ ಕವಣದಾಲ ಗ್ರಾಮದ್ದಾಯಿತು. ಮಧುಗಿರಿ ತಾಲ್ಲೂಕಿನ ಒಂದು ಪುಟ್ಟ ಗ್ರಾಮ ಕವಣದಾಲ ಪವಿತ್ರ ಭೂಮಿ ಸಿದ್ಧರ ಬೆಟ್ಟದ ಪರಿಸರಕ್ಕೆ ಹೊಂದಿಕೊಂಡಂತಿದೆ ಶರಣ ಬಂಧು ಶ್ರೀ ಸಿದ್ಧಬಸವಯ್ಯನವರು ನಿವೃತ್ತ ಉಪಾಧ್ಯಾಯರು ಶಾಲಾ ಕೊಠಡಿಯೊಂದನ್ನು ಗ್ರಾಮದ ಮಕ್ಕಳಿಗಾಗಿ ಕಟ್ಟಿಸಿಕೊಟ್ಟ ಶುಭ ಸಂದರ್ಭದಲ್ಲಿ ಬಸವಣ್ಣನವರ ಜಯಂತಿಯನ್ನು ಆಚರಿಸುವ ಸಂಕಲ್ಪವನ್ನು ಮಾಡಿದರು. ಅವರ ಹಂಬಲ ಅರಳಿತು ದಿನಾಂಕ 2-2-
ಗ್ರಾಮೀಣ ಬಂಧುಗಳು ಸಮಾರಂಭದಲ್ಲಿ ಭಾಗಿಗಳಾಗಿದ್ದರು.

ಕ್ಷೇತ್ರದ ಶಾಸಕರಾದ ಶ್ರೀ ಸಿ.ಎನ್. ಭಾಸ್ಕರಪ್ಪನವರು ಮಾತನಾಡುತ್ತ ಪರಮ ಪೂಜ್ಯ ಶ್ರೀ ಶ್ರೀಗಳು ಮಾಡುತ್ತಿರುವ ಅದ್ಭುತವಾದ ಸೇವೆಯನ್ನು ಮುಕ್ತ ಕಂಠದಿಂದ ಪ್ರಶಂಸಿದಲ್ಲದೆ "ಅಭಿನವ ಬಸವೇಶ್ವರರು" ಎಂಬಂತ್ತಿದ್ದಾರೆ ಸ್ವಾಮಿಗಳು ಎಂದರು.

ಮಧುಗಿರಿ ಟ.ವಿ.ವಿ. ಕಾಲೇಜಿನ ಕನ್ನಡ ಪ್ರಾಧ್ಯಾಪಕರಾದ ಶ್ರೀ ಯುತ ಹೆಚ್.ಬಿ. ಮಹದೇವಪ್ಪನವರು, ಬಸವಣ್ಣನವರು ಸ್ವತಂತ್ರ ವಿಚಾರಶೀಲರು,ಅಪಾರ ಕಾರುಣ್ಯಮೂರ್ತಿ, ದೀನದಲಿತರಾಗಿ ಭರತಖಂಡ ಬದುಕಿನಲ್ಲಿ ಹೋರಾಟ ಮಾಡಿದ ಅಸಾಮಾನ್ಯ ವ್ಯಕ್ತಿ ಎಂಬುದಾಗಿ ಉಪನ್ಯಾಸ ಮಾಡಿದರು.

ಕೆಸ್ತೂರು ಕಿರಿಯ ಕಾಲೇಜಿನ ಹಿಂದಿ ಪ್ರಾಧ್ಯಾಪಕರಾದ ಶ್ರೀ ಸೋಮಸುಂದರಂ ಅವರು, ಬಸವಾದಿ ಶರಣು ಮಾಡಿದ ಸಾಹಿತ್ಯ ಕ್ರಾಂತಿಯನ್ನು ತುಂಬು ಹೃದಯದಿಂದ ಸುಂದರವಾಗಿ ನಿರೂಪಿಸಿದರು.

ಶ್ರೀ ಮರಿಬಸವಯ್ಯನವರು ಹೊಳಲ್ಕೆರೆ ಕಿರಿಯ ಕಾಲೇಜಿನ ಉಪನ್ಯಾಸಕರು

ಮಾತನಾಡುತ್ತ ಯುವ ಜನಾಂಗ ಬಸವಣ್ಣನವರ ಆದರ್ಶ ಕಣ್ಣೆದುರಿಗಿಟ್ಟು ದುಡಿದರೆ ಜೀವನ ಫಲಭರಿತವಾಗುವುದರಲ್ಲಿ ಸಂದೇಹವಿಲ್ಲ ಎಂದು ನುಡಿದರು.

ಶ್ರೀ ಸಿದ್ಧಬಸವಯ್ಯನವರು, ಕವಣದಾಲ ಹಿರಿಯರು ತಮ್ಮ ಜೀವನದಲ್ಲಿ ಬಸವಣ್ಣನವರು ಸ್ಫೂರ್ತಿಯಿತ್ತು ಕಾಯಕ ದಾಸೋಹದ ಮಾರ್ಗದಲ್ಲಿ ತಮ್ಮ ಇತಿ ಮಿತಿಯಲ್ಲಿ ನಡೆಯುವಂತೆ ಮಾಡಿದ ಮಹಾನುಭಾವರು ಎಂಬುದಾಗಿ ನುಡಿದರು.

ಹರಕು, ಚಿಂದಿಯನ್ನುಟ್ಟ, ಕುರುಚಲುಗಡ್ಡಬಿಟ್ಟ, ತಲೆಗೆ ಎಣ್ಣೆ ಕಾಣದ ಗ್ರಾಮೀಣ ಬಂಧು-ಭಗಿನಿಯರು, ತಮ್ಮ ಹಾಡುಗಳಲ್ಲಿ ಬಸವಾದಿ ಪ್ರಮಥರ ಜೀವನದ ಸುಂದರ ಚಿತ್ರವನ್ನು ಹೇಗೆ ಬಿಡಿಸಿದ್ದಾರೆಂಬುದನ್ನು ಶ್ರೀ ಹೆಚ್.ವಿ ವೀರಭದ್ರಯ್ಯನವರು ತಿಳಿಸಿದರು.

"ಬಸವಣ್ಣನವರ ಅಂತರಂಗ ದೀನದಲಿತರ, ದುಃಖಿಗಳ, ಶೋಷಣೆಗೊಳಗಾದವರ ಬಗ್ಗೆ ಅನವರತವೂ ಸಾನುಕಂಪೆಯಿಂದ ತುಂಬಿದ್ದಿತು. ವೈಯಕ್ತಿಕ ಶುದ್ಧಿ, ಸಾಮಾಜಿಕ ಶುದ್ಧಿಗೆ ಪವಿತ್ರ ದಾರಿಯಾಗುತ್ತದೆ. ಜೀವನಕ್ಕೆ ಬರೀ ಭೋಗ ವೈಭವಗಳ ಸಾಮಗ್ರಿಯಿದ್ದರೆ ಸಾಲದು, ಅವುಗಳನ್ನು ಕೊಟ್ಟಂತಹ ಪರಮಾತ್ಮನ ಸ್ಮರಣೆಮಾಡುವಂಥ ಹೃದಯ ಬೇಕು. ಬದುಕಿನಲ್ಲಿ ಎದುರಾಗುವ ಸಮಸ್ಯೆಗಳಿಗೆ ಹೆದರಬಾರದು. ಭಗವಂತನೊಡ್ಡುವ ಪರೀಕ್ಷೆಗಳನ್ನು ಭಕ್ತ ವಿಶ್ವಾಸಗಳಿಂದ ಗೆಲ್ಲಬೇಕು "ಕೊಲುವೆನೆಂಬ ಭಾಷೆ ದೇವನದು, ಗೆಲುವೆನೆಂಬ ಭಾಷೆ ಭಕ್ತನದು" ಎಂಬ ಆತ್ಮ ವಿಶ್ವಾಸ ಬಸವಣ್ಣನವರದ್ದು. ನಮಗದು ದಾರಿ ದೀಪ ಕಾಯಕ ಮಾಡದ ಹೊರತು ಊಟ ಮಾಡುವ ಹಕ್ಕು ನೈತಿಕವಾಗಿರಲಾರದು. ಜಗತ್ತಿನ "ಸಕಲ ಜೀವಗಳಿಗೆ ಲೇಸನೇ ಬಯಸುವವನೇ ಕುಲಜ ನೆಂದರು ಭಗವಾನ್ ಬಸವಣ್ಣನವರು" -ಎಂಬುದಾಗಿ ಅಧ್ಯಕ್ಷತೆ ವಹಿಸಿದ್ದ ಪರಮ ಪೂಜ್ಯ ಶ್ರೀ ಶ್ರೀ ಗಳವರು ಆಶೀರ್ವಚನ ನೀಡಿದರು.

ರಾತ್ರಿ ಜಗಜ್ಯೋತಿ ಬಸವಣ್ಣನವರ ನಾಟಕ ಪ್ರದರ್ಶನವಿತ್ತು. ಸುಮಾರು ಹತ್ತು ಸಾವಿರ ಜನ ನಾಟಕ ನೋಡಿ ಆನಂದಿಸಿದರು. ವಚನ ಸಂಗೀತಕ್ಕೆ ಮಾರು ಹೋದ ದಬ್ಬೇಗಟ್ಟದ ಹಿರಿಯರೊಬ್ಬರು ಕಣ್ಣಿನಲ್ಲಿ ನೀರ ತುಂಬಿಕೊಂಡು ಹೇಳುತ್ತ ನಮ್ಮಪ್ಪನ ಸೇವೆಯಿಂದ ಇಂಥದನ್ನೆಲ್ಲ ನೋಡುವ ಭಾಗ್ಯ ನನ್ನಂಥವರಿಗಾಯ್ತು, ಬಸವಣ್ಣನೇ ಮತ್ತೆ ಹುಟ್ಟಿ ಬಂದಿದಾನೆ ಸ್ವಾಮಿಗಳ ರೂಪದಲ್ಲಿ-ಎಂದು ನಾಟಕ ಮುಗಿಸಿಕೊಂಡು ಹಿಂತಿರುಗುವಾಗ ಜನ ಗುಂಪು ಗುಂಪಾಗಿ ಮಾತನಾಡಿಕೊಂಡು ಊರುಗಳಿಗೆ ತೆರಳುತ್ತಿದ್ದರು.

ಮತ್ತೆ ಬರೆಯುತ್ತೇನೆ.



## 'ಹಳೆಯ ವಿದ್ಯಾರ್ಥಿ ಸಂಘದ'

### ಆಜೀವ ಸದಸ್ಯತ್ವ ಪಡೆದಿರುವರು

ಸರ್ವಶ್ರೀ

185 ಎಂ. ಹೆಚ್ ಸಿದ್ದನಂಜಯ್ಯ, ಹೊನ್ನೇನಹಳ್ಳಿ, ಭೀಮಸಂದ್ರ ಅಂಚೆ ತುಮಕೂರು ತಾಲ್ಲೂಕು

186 ತಿಪ್ಪೇಸಿದ್ದಯ್ಯ, ಉಪಾಧ್ಯಾಯರು, 10 ನೇ ಮುಖ್ಯ ರಸ್ತೆ, ಜಯನಗರ ಬೆಂಗಳೂರು-560011

187 ಎನ್ ವಿ. ರಾಜು, ಎನ್. ಎಸ್ ಟಿ. ಬೀದಿ ಆಳೇಪೇಟೆ, ಭದ್ರಾವತಿ

188 ವಿ. ಭದ್ರಯ್ಯ. ಸಂಶೋಧಕ, ಕಿದ್ವಾಯಿ ಆಸ್ಪತ್ರೆ, ಬೆಂಗಳೂರು-29

189 ಎಸ್. ಎಂ. ನಾಗರಾಜಪ್ಪ, ಸಹಾಯಕ ಲೆಕ್ಕಾಧಿಕಾರಿ, ಕೆ ಇ. ಬಿ. ಚಿಕ್ಕಮಗಳೂರು

190 ಸಿದ್ಧಲಿಂಗ ಶಿವಾನಂದ ಸ್ವಾಮಿಗಳು, ಹುಲಿಯೂರುದುರ್ಗ ಮಠ ಕುಣಿಗಲ್ ತಾಲ್ಲೂಕು.

200 ಶ್ರೀ ಶ್ರೀ ಶಿವರುದ್ರ ಸ್ವಾಮಿಗಳು, ಅಧ್ಯಕ್ಷರು, ಕಂಚುಗಲ್ ಬಂಡೇಮಠ ಮಾಗಡಿ ತಾಲ್ಲೂಕು.

192 ಶ್ರೀ ಶಾಂತಮಲ್ಲಿಕಾರ್ಜುನ ಸ್ವಾಮಿಗಳು, ಬೇಲೂರು ಮಠ ಚನ್ನಪಟ್ಟಣ ತಾಲ್ಲೂಕು

193 ಕೆ. ನಾಗರಾಜು, ಉಪಾಧ್ಯಾರು, ಮಾದೇನಹಳ್ಳಿ, ಡಾಬಸ್‌ಪೇಟೆ ಅಂಚೆ ನೆಲಮಂಗಲ ತಾಲ್ಲೂಕು

194 ಎಸ್. ಶಾಂತಯ್ಯ, ಉಪಾಧ್ಯಾಯರು, ಕಂಬಾಳು ಮತ್ತು ಅಂಚೆ ನೆಲಮಂಗಲ ತಾಲ್ಲೂಕು.

195 ಎನ್. ಎಸ್. ನಾರಾಯಣಪ್ಪ, ಸಹಾಯಕ ಲೆಕ್ಕಾಧಿಕಾರಿ. ಕೆ. ಇ. ಬಿ ತುಮಕೂರು.

196 ಎಂ. ಸಿದ್ದಲಿಂಗಯ್ಯ, 8 ನೇ ಕ್ರಾಸ್ ಸೋಮೇಶ್ವರ ಪುರ ಬಡಾವಣೆ ತುಮಕೂರು

197 ಎಸ್. ರೇಣುಕಯ್ಯ, ಉಪಾಧ್ಯಾಯರು, ಮಾರೂರು ಮತ್ತು ಅಂಚೆ ಮಾಗಡಿ ತಾಲ್ಲೂಕು

198 ಆರ್. ಎಸ್. ಸಿದ್ದರಾಮಣ್ಣ, ರಾಮಗೊಂಡನಹಳ್ಳಿ, ಚಿಕ್ಕತೊಟ್ಟಲಕೆರೆ ಅಂಚೆ, ತುಮಕೂರು ತಾಲ್ಲೂಕು

199 ಎಸ್ ದೊಡ್ಡಸಿದ್ದಯ್ಯ, ಸಬ್ ಇನ್ಸ್‌ಪೆಕ್ಟರ್, ಚಿಕ್ಕನಾಯಕನಹಳ್ಳಿ ಅಂಚೆ ತುಮಕೂರು ಜಿಲ್ಲೆ.

200 ಬಿ. ಎನ್. ಮಹಲಿಂಗಪ್ಪ, ಸರ್ವೇಯರ್, ADLR ಕಾರ್ಯಾಲಯ, ಸಾಗರ

## 'ಸಿದ್ಧಗಂಗಾ' ಚಿರಾಯುವಾಗಲೆಂದು ಹರಸಿ ಹಾರೈಸುವ ಆಜೀವ ಸದಸ್ಯರ ಬಳಗ

ಸರ್ವಶ್ರೀ

1121 ಕೆ. ಆರ್. ವೀರಣ್ಣ, ಉಪಾಧ್ಯಾಯ, ನಂ k/4 (21/1), ಗಜ್ಜೆಬಶೆಟ್ಟಿ ಗಲ್ಲಿ ಅರಳೇಪೇಟೆ, ಬೆಂಗಳೂರು- 53.

1122 ಹೆಚ್. ಬಿ. ಪಿ. ಆರಾಧ್ಯ, ಹೊಸಕರೆ ಮತ್ತು ಅಂಚೆ, ಗುಬ್ಬಿ ತಾ|| ತುಮಕೂರು ಜಿಲ್ಲೆ.

1123 ಕೆ. ಸಿ ರಾಮಯ್ಯ, ಪ್ರಾಂಶುಪಾಲರು' ಕಾಳಿದಾಸ ಜೂನಿಯರ್ ಕಾಲೇಜ್ ತುಮಕೂರು.

1124 ಕೆ. ಎಸ್. ಪರಶಿವಮೂರ್ತಿ, ನಂ 301, 7ನೇ ಮುಖ್ಯ ರಸ್ತೆ, ಸಿದ್ಧಾರ್ಥ ನಗರ ಮೈಸೂರು -570011

1125 ಕೆ. ಆರ್ ಪರಮಶಿವಯ್ಯ ನಿವೃತ್ತ ಎಗ್ಸಿ|| ಇಂಜಿನಿಯರ್, ನಂ, 372, 7ನೇ ಮುಖ್ಯ ರಸ್ತೆ, ಸಿದ್ಧಾರ್ಥನಗರ, ಮೈಸೂರು-570011

1126 ಎಂ. ಶಿವನಾಗಪ್ಪ, (ಅ. ಇಂ) S/O ಮಹಲಿಂಗಪ್ಪ ನಂ 371, 7ನೇ ಮುಖ್ಯ ರಸ್ತೆ, 1ನೇ ಸ್ಟೇಜ್ ಸಿದ್ಧಾರ್ಥನಗರ, ಮೈಸೂರು -570011

1127 ಎಂ ಎಸ್. ಪ್ರಭು, ಎಗ್ಸಿ|| ಇಂ|| S/O ಟಿ. ಎಸ್. ನಂಜಪ್ಪ 7ನೇ ಮುಖ್ಯ ರಸ್ತೆ, ಜಯಲಕ್ಷ್ಮೀಪುರಂ, ಮೈಸೂರು. -570012

1128 ಶ್ರೀಮತಿ ನೀಲಮ್ಮ, ನಂ. 33, 4 ನೇ ಕ್ರಾಸ್, 5 ನೇ ಮುಖ್ಯರಸ್ತೆ, ಮಾಡಲ್ ಹೌಸ್, ಸಾರ್ವಜನಿಕ ಹಾಸ್ಟೆಲ್ ರಸ್ತೆ, ವಿದ್ಯಾರಣ್ಯ ಪುರಂ, ಮೈಸೂರು-570008.

1129 ಎಸ್. ಎಂ. ಬಸವಣ್ಣ, ನಂ 2767/2A, 5ನೇ ಮುಖ್ಯರಸ್ತೆ, ವಾಣಿ ವಿಲಾಸ ಪುರಂ, ಮೈಸೂರು-570002

1130 ಕೆ. ಎಸ್. ಈಶ್ವರಯ್ಯ, ಕದರನಹಳ್ಳಿ, ಲಕ್ಷ್ಮೀಪುರ ಅಂಚೆ, ನೆಲಮಂಗಲ ತಾ, ಬೆಂಗಳೂರು. -ಜಿಲ್ಲಾ.

ಮುಂದುವರಿಯುತ್ತದೆ.